

# ನನ್ನ ಪರೀಕ್ಷೆ

(ಡಾಕ್ಟರ್ ಸುಬ್ಬಣ್ಣ ಹಂದೆಯವರ ವೃತ್ತಿ ಬದುಕಿನ ಅನುಭವ ಕಥನ)

# ಮುನ್ನುಡಿ

ಡಾ. ಸುಬ್ಬಣ್ಣ ಹಂದೆಯವರು ಸದ್ಗತಿ ಹೊಂದಿ ಒಂದು ವರ್ಷ ಆಗಿಯೇ ಹೋಯಿತಾ ಅನ್ನುವಷ್ಟು ವೇಗದ ಬದುಕಿನ ದಿನಗಳನ್ನು ಅವರ ಕುಟುಂಬ, ಹಿತೈಷಿಗಳು, ಸಂಬಂಧಿಕರು, ಸ್ನೇಹಿತರು ಕಳೆದಿದ್ದೇವೆ. ಇದೀಗ ಅವರ ಪ್ರಥಮ ಪುಣ್ಯತಿಥಿಯ ದಿನಾಂಕವೂ ಬಂದು ಈ ಸಮಯದಲ್ಲಿ ಅವರಿಗೂ ಖುಷಿ ಆಗುವ ಕಾರ್ಯಕ್ಕೆ ನನ್ನಕ್ಕ ಜಯಂತಿ ಹಂದೆ ಮುಂದಾಗಿದ್ದು ನನಗೊಂದು ಜವಾಬ್ದಾರಿ ಹೊರಿಸಿದ್ದಾರೆ. ಸುಬ್ಬಣ್ಣ ಹಂದೆಯವರ ಸದ್ಗತಿಯ ವರ್ಷಾಂತಕದ ಮುನ್ನಾ ದಿನ ಒಂದು ಪುಸ್ತಕ ಲೋಕಾರ್ಪಣೆಗೊಳ್ಳಲಿದೆ. ಆ ಪುಸ್ತಕಕ್ಕೆ ಮುನ್ನುಡಿ ಬರೆಯಲು ಜಯಂತಿ ಅಕ್ಕ ಕೇಳಿದಾಗ ಖುಷಿಯಿಂದ “ಅದೇನು, ಒಂದೇ ನಿಮಿಷದಲ್ಲಿ ಬರೆಯುತ್ತೇನೆ” ಅಂತ ಅಹಂಕಾರಪಟ್ಟಿದ್ದೆ. ಆದರೆ ಅವರ ಲೇಖನಗಳನ್ನು ಓದಿದ ಮೇಲೆ, ನನಗೆ ಮುನ್ನುಡಿ ಬರೆಯಲು ಸಿಕ್ಕ ಅವಕಾಶ ಯೋಗದಿಂದ ಹೊರತು, ಯೋಗ್ಯತೆಯಿಂದ ಅಲ್ಲ ಅಂತ ಘಂಟಾಘೋಷವಾಗಿ ಹೇಳಬಲ್ಲೆ.

ನನ್ನ ತಂದೆ ಮತ್ತು ತಾಯಿ ಕಡೆಯ ಸಂಬಂಧಿಕರಲ್ಲಿ ವೈದ್ಯರುಗಳು ಬಹಳಷ್ಟು ಜನ ಇದ್ದೇವೆ. ಅವರಲ್ಲಿ ಕುಟುಂಬ ವೈದ್ಯರುಗಳು (ಫ್ಯಾಮಿಲಿ ಫಿಸಿಶಿಯನ್) ಕಡಿಮೆ ಮಂದಿ ಇದ್ದೇವೆ. ಹೆಚ್ಚಿನವರು ಸ್ಪೆಷಲಿಸ್ಟ್ ವೈದ್ಯರುಗಳು. ಆದರೆ ಕೇವಲ ಎಂಬಿಬಿಎಸ್ ಪದವಿ ಪಡೆದು ಜೀವನ ಹೋರಾಟಕ್ಕೆ ಬಹಳ ಬೇಗ ಇಳಿದ ಡಾ. ಹಂದೆಯವರು ಎಷ್ಟೋ ನುರಿತ ಪರಿಣತ ಸ್ಪೆಷಲಿಸ್ಟ್‌ಗಳಿಗಿಂತ ಕಡಿಮೆಯೇನೂ ಇಲ್ಲ ಎನ್ನುವುದು ಅವರ ಅನುಭವಕಥನಗಳಿಂದ ವೈದ್ಯರಲ್ಲದವರಿಗೂ ಮನವರಿಕೆ ಆಗುವುದು ಖಂಡಿತ.

ಡಾ. ಹಂದೆಯವರ ಉದ್ಯೋಗ ಪರ್ವದ ಅನುಭವ ಕಥಾನಕಗಳ ಸಂಗ್ರಹ ಇವತ್ತಿನ ವೈದ್ಯಕೀಯ ಕ್ಷೇತ್ರಕ್ಕೆ ಒಂದು ಪಠ್ಯಪುಸ್ತಕವಿದ್ದಂತೆ ಇರುವುದು ನನಗನ್ನಿಸಿದ ಅನುಭವ. ಜೀವನವಿಡೀ ‘ಕರ್ಮಯೋಗಿ’ಯಾಗಿಯೇ ಕಳೆದು ವೈದ್ಯಕೀಯ ವೃತ್ತಿಯಿಂದ ಪಡೆದದ್ದು ಕಡಿಮೆ, ಕೊಟ್ಟಿದ್ದು ಜಾಸ್ತಿ ಅನ್ನುವುದು ಮನದಟ್ಟಾಗುತ್ತದೆ. ದಕ್ಷಿಣ ಕನ್ನಡದ ಬ್ರಹ್ಮಾವರ, ಉತ್ತರಕನ್ನಡದ ಮಂಕಿ, ವಿದೇಶ ಶ್ರೀಲಂಕಾದಲ್ಲೂ ವೈದ್ಯಕೀಯ ಸೇವೆಮಾಡಿ, ಹುಟ್ಟಿ ಬೆಳೆದ ಮಣ್ಣಿನ ಗಟ್ಟಿ ಸಂಸ್ಕೃತಿಯ ಜೊತೆ ವೈದ್ಯಕೀಯ ವೃತ್ತಿಗೆ ಬೇಕಾದ ಗಟ್ಟಿ ನಿರ್ಧಾರಗಳನ್ನು ಸೇರಿಸಿಕೊಂಡು, ಕೇವಲ ರೋಗಿಗಳನ್ನು ನೋಡುವುದೇ ವೃತ್ತಿ, ಪ್ರವೃತ್ತಿಗಳನ್ನು

ಮಾಡಿಕೊಂಡ ಅಪರೂಪದ ಕುಟುಂಬ ವೈದ್ಯರೆನ್ನಲು ಅವರ ಬರಹಗಳಲ್ಲಿ ವೈದ್ಯಕೀಯ ಲೋಕದ ಆಚೆಯ ಕೆಲವು ಮಾತುಗಳೇ ಸಾಕ್ಷಿ. ಸುಲಲಿತ ಬರವಣಿಗೆ, ಪಟ್ಟ ಅನುಭವವನ್ನು ಮಾರ್ಮಿಕವಾಗಿ ಹೇಳುವ ಶೈಲಿ, ಸಾಮಾನ್ಯ ಓದುಗನಿಗೂ ಪುಸ್ತಕವನ್ನು ಕೆಳಗಿಡದಂತೆ ಮಾಡುತ್ತದೆ.

ನಾನೊಬ್ಬ ಅವರ ಆತ್ಮೀಯ ಸಂಬಂಧಿ ವೈದ್ಯಕೀಯ ಕ್ಷೇತ್ರದಲ್ಲಿ ಸಹವರ್ತಿ ಅನ್ನುವ ಎಚ್ಚರದಿಂದ ಅವರ ವ್ಯಕ್ತಿತ್ವ ವರ್ಣನೆಗೆ ಮುಂದಾಗಲಾರೆ, ಹಾಗೆ ಮಾಡಿದರೆ ಪುಸ್ತಕದ ತೂಕ ಕಡಿಮೆ ಆದೀತು. ಒಟ್ಟಿನಲ್ಲಿ ಕೇವಲ ಹಿತೈಷಿಗಳು, ಸಂಬಂಧಿಕರು, ಸ್ನೇಹಿತರು ಮಾತ್ರ ಓದುವಂತ ಪುಸ್ತಕ ಅಲ್ಲ. ಮಾನವೀಯ ಮೌಲ್ಯಗಳನ್ನು ವೈದ್ಯಕೀಯ ವೃತ್ತಿಯ ಹಿರಿಮೆಯನ್ನು ಎತ್ತಿಹಿಡಿಯುವ ಡಾ. ಹಂದೆಯವರ ವೃತ್ತಿ ಕಥನವನ್ನು ಪ್ರತಿ ವೈದ್ಯರೂ ಓದುವಂತೆ ಆಗಲಿ. ಇಂತಹ ಸಂಗ್ರಹಯೋಗ್ಯ ಪುಸ್ತಕವನ್ನು ಹೊರತರುವಲ್ಲಿ ಶ್ರಮಿಸಿದ ಎಲ್ಲರನ್ನೂ, ಪ್ರತ್ಯೇಕವಾಗಿ ಜಯಂತಿ ಅಕ್ಕ ಮತ್ತು ಅವಳ ಕುಟುಂಬವನ್ನೂ ಅಭಿನಂದಿಸುತ್ತೇನೆ.

ಶಿವಮೊಗ್ಗ **ಡಾ. ರತ್ನಾಕರ್, ಮಂಟಪ**
1-3-2023

# ಅರಿಕೆ

ನಾನು ಡಾಕ್ಟರ್ ಸುಬ್ಬಣ್ಣ ಹಂದೆಯವರ ಮದುವೆಯಾಗಿ ಬಂದು ಕೆಲವೇ ತಿಂಗಳಲ್ಲಿ ತಿಳಿಯಿತು, ಸುಬ್ಬಣ್ಣ ಹಂದೆಯವರಿಗೆ ನಾನು ಎರಡನೇ ಹೆಂಡತಿಯಾಗಿದ್ದೆ! ಅವರು ಇದಕ್ಕೂ ಮೊದಲೇ ತುಂಬಾ ಪ್ರೀತಿಸಿ, ಪ್ರಯತ್ನಪಟ್ಟು ವೈದ್ಯ ಸೇವಾವೃತ್ತಿ ಎಂಬ ಇನ್ನೊಂದು ವಧುವನ್ನು ವರಿಸಿದ್ದರು. ಎಂದಿದ್ದರೂ, ಹೇಗಿದ್ದರೂ ಹಂದೆಯವರಿಗೆ ಕೆಲಸವೂ, ವಿರಾಮವೂ ತನ್ನ ಸೇವಾವೃತ್ತಿಯೆ ಆಗಿತ್ತು. ಹಾಗಾಗಿ ಅನೇಕ ಬಾರಿ ನಾನು ಒಂಟಿ ಎನಿಸುವುದು ಇತ್ತು. ಯಾವುದೇ ಶುಭಸಮಾರಂಭಗಳಿಗೆ, ಕಾರ್ಯಕ್ರಮಗಳಿಗೆ ನಾನೊಬ್ಬಳೇ ಹೋಗುವುದು ಅನಿವಾರ್ಯವಾಗಿತ್ತು. ಕರ್ತವ್ಯವು ಆಯಿತು. ಹಾಗೆಂದು ಹಂದೆಯವರು ಕುಟುಂಬವನ್ನು ಅವಗಣಿಸಿದವರಲ್ಲ. ಸೇವೆಯನ್ನು ಹೆಚ್ಚು ಪ್ರೀತಿಸಿದವರು ಅಷ್ಟೇ.

ಹಂದೆಯವರು ಕ್ಲಿನಿಕ್ಕನ್ನು ಮುಗಿಸಿ ಮನೆಗೆ ಬಂದಾಕ್ಷಣ ಅಲ್ಲಿಯ ಎಲ್ಲ ವಿವರವನ್ನು ನನಗೆ ಹೇಳುತ್ತಿದ್ದರು. ಆಗೆಲ್ಲ ಮನೆಯಲ್ಲಿ ಅಷ್ಟು ಹೊತ್ತು ಒಬ್ಬಳೆ ಇದ್ದೆ ಎಂಬುದು ಮರೆತು, ನಾನು ಕೂಡ ಕ್ಲಿನಿಕ್ಕಿನಲ್ಲಿ ಇದ್ದ ಅನುಭವ ಆಗುತ್ತಿತ್ತು. ಹೀಗೆ ನನ್ನ ಒಂಟಿತನವು ಮಾಯವಾಯಿತು. ಅವರ ಅನುಭವವನ್ನು ಕೇಳುವಾಗ, ರೋಗಿಯ ತತ್ಕಾಲದ ನೋವು, ನಲಿವು, ಕಷ್ಟ, ಸುಖಗಳ ಸ್ಥಿತಿ, ವೈದ್ಯರಾದವರು ರೋಗಿಯ ಮನಸ್ಥಿತಿಯೊಂದಿಗೆ ಹೋರಾಡುವ ಶ್ರಮವೆಲ್ಲ ಒಂದು ಪುಸ್ತಕವಾಗಬಹುದಲ್ಲವೇ ಎಂದೂ ಅನಿಸಿತ್ತು. ಆದರೆ ಹಂದೆಯವರ ಬಿಡುವಿಲ್ಲದ ಬದುಕಿಗೆ ನನ್ನ ಯೋಚನೆ ಭಾರವಾಗಬಹುದೆಂದು ಸುಮ್ಮನಿದ್ದೆ.

ಕಾಲ ಜಗತ್ತನ್ನೇ ಸ್ತಬ್ಧಗೊಳಿಸಿತು. ಕಣ್ಣಿಗೂ ಕಾಣದ ಸೂಕ್ಷ್ಮ ಜೀವಿಯೊಂದು ಜಗತ್ತಿನ ಓಟಕ್ಕೆ ಬ್ರೇಕ್ ಹಾಕಿತ್ತು. ಅನಾದಿಯಿಂದಲೆ ಓಡುತ್ತಿರುವ ಜಗತ್ತು, ವಿಶ್ರಾಂತಿಯನ್ನು ಪಡೆದಂತಿತ್ತು. ಆ ವಿರಾಮ ವರವಾಗಿ ಪರಿಣಮಿಸಿತು. ಈ ಹಿಂದೆಯೆ, ಭವದಿಂದಲೂ ಭಾವದಿಂದಲೂ ಸಂಬಂಧಿಕನಾದ, ಮೂಕ ಪ್ರಾಣಿಗಳ ನೋವು ನಲಿವುಗಳಿಗೆ ನುಡಿಯಾಗಿ ನಿಂತ, ಪಶುವೈದ್ಯ ಮಂಗಳೂರಿನ ಮನೋಹರ ಉಪಾಧ್ಯ ಮತ್ತು ಅವರ ಹೆಂಡತಿ ದಂತವೈದ್ಯೆ ಶ್ರೀಮತಿ ವಿದ್ಯಾ ಮಾತನಾಡುತ್ತಾ, ರೋಗಿಗಳೊಂದಿಗಿನ ಸಂವೇದನೆಯನ್ನು, ಸಮಸ್ಯೆಯನ್ನು ಬರೆಯುವಂತೆ ಸೂಚನೆಯನ್ನು ನೀಡಿದ್ದರು. ಹಾಗೆ ಕಾರ್ಯಪ್ರವೃತ್ತರಾದ ಹಂದೆಯವರು ವೈದ್ಯವೃತ್ತಿಯಲ್ಲಿ ಆದ ಅವರ ಅನೇಕ ಅನುಭವಗಳಲ್ಲಿಯ ಕೆಲವನ್ನು ಆಯ್ಕೆ ಮಾಡಿ ಬರೆಯುತ್ತಿದ್ದರು. ಆದರೆ ವಿಧಿವೈಚಿತ್ರ್ಯವೆಂಬಂತೆ,

ಬ್ರಹ್ಮನು ಇವರ ಹಣೆಯ ಮೇಲೆ ಬರೆಯುವಾಗ ಇಲ್ಲಿಗೆ ಶಾಯಿ ಮುಗಿದಿತ್ತೇನೋ?! ಈ ಲೇಖನಗಳನ್ನು ಅರ್ಧಕ್ಕೇ ನಿಲ್ಲಿಸಿ ಅನಿರೀಕ್ಷಿತವಾಗಿ ಹೊರಟೇ ಬಿಟ್ಟರು. ಬಿಟ್ಟುಕೊಂಡಿರುವ ನನ್ನ ಕಣ್ಣಲ್ಲಿ ಅವರ ಚಿತ್ರ ಮಾತ್ರ ತುಂಬಿಕೊಂಡಿದೆ. 2022 ಫೆಬ್ರವರಿ 21ರ ದಿನದಂದು ಅನಿರೀಕ್ಷಿತ ಅಘಾತ ನನ್ನ ಸಂಸಾರ ರಥದ ಒಂದು ಚಕ್ರಕ್ಕೆ ಬಡಿದಿತ್ತು. ನನ್ನವರು ಈ ಲೋಕವನ್ನು ಬಿಟ್ಟುಹೊರಟರು. ನಿಜವಾಗಿಯೂ ಒಂಟಿತನ ಎಂದರೆ ಏನೆಂದು ನನಗೆ ಈಗ ಅರ್ಥವಾಯಿತು.

ಮಕ್ಕಳಿಬ್ಬರು ವಿದೇಶದಲ್ಲಿ ನೆಲೆಸಿದ್ದಾರೆ. ಬೆಂಗಳೂರಿನ ಮನೆಯಲ್ಲಿ ನನ್ನವರ ನೆನಪನ್ನು ತುಂಬಿಕೊಂಡು ಕಾಲವನ್ನು ಕಳೆಯುತ್ತಿದ್ದೆ. ಆಗ ನನ್ನ ಒಂಟಿತನಕ್ಕೆ ಸಹಾಯವಾದುದು ಮತ್ತದೇ ನೆನಪು, ಮತ್ತದೇ ಮೇಲುಕು. ಆಗ ಬಂದ ಯೋಚನೆ, ಹಂದೆಯವರು ಬರೆದ ಲೇಖನಗಳನ್ನು ಪುಸ್ತಕವಾಗಿಸುವ ಪ್ರಯತ್ನವನ್ನು ಮಾಡಿಸಿತು. ಹಾಗೆ ಈ ಒಂಟಿತನ ನನಗೆ ಪರೀಕ್ಷೆಯಾಗಿಯೂ ತೋರಿತು. ವಸ್ತುಗಳನ್ನು ಕಾಣುವ ಕಣ್ಣಿಗೆ ಒಂದು ಅಂತರಬೇಕಾದಂತೆ, ನನ್ನವರ ಇನ್ನೂ ಅನೇಕ ಗುಣಗಳು ಈಗ ನನ್ನ ಗಮನಕ್ಕೆ ಹೆಚ್ಚು ಹೆಚ್ಚು ಬರತೊಡಗಿತು. ಬದುಕಿನ ದಾರಿಯಲ್ಲಿ ನಡೆದು ತೋರಿಸಿದ್ದರು. ಆ ದಾರಿಯಲ್ಲಿ ನಡೆಯುವುದಕ್ಕೆ ನನಗೆ ಈಗ ಈ ಪುಸ್ತಕವೇ ಬೆಳಕು. ಒಂಟಿ ಬದುಕಿನ ಪರೀಕ್ಷೆಯಲ್ಲಿ ಉತ್ತೀರ್ಣಳಾಗುವುದಕ್ಕಿರುವ ಮಾರ್ಗದರ್ಶಿ ಈ ಪುಸ್ತಕ ಎಂಬ ಭಾವನೆ ನನ್ನದು.

ಸುಬ್ಬಣ್ಣ ಹಂದೆಯವರು ಸ್ವಾತಂತ್ರ್ಯಕ್ಕಿಂತ ಮೊದಲೇ ಅಂದರೆ 1944ರ ಅಕ್ಟೋಬರ್ 6ರಂದು ಉಡುಪಿ ಜಿಲ್ಲೆಯ ಕೋಟದಲ್ಲಿ ಜನಿಸಿದವರು. ಶ್ರೀಮತಿ ಲಕ್ಷ್ಮೀದೇವಿ ಹಾಗೂ ಶ್ರೀ ಚೆನ್ನಪ್ಪ ಹಂದೆಯವರ ಮೂರನೆಯ ಮಗನಾಗಿ ಮನೆಯನ್ನು, ಮನವನ್ನು ತುಂಬಿಕೊಂಡರು. ನಾಲ್ವರು ಅಕ್ಕಂದಿರು ಇಬ್ಬರು ತಂಗಿಯರು. ಹೀಗೆ ಎಂಟು ಮಕ್ಕಳ ತುಂಬು ಕುಟುಂಬ. ಕಿರಿಯ ಮಗನಾಗಿ ತಾಯಿಯ ಪ್ರೀತಿಗೆ ಆಧಾರವಾದರು. ಕೊನೆಯವರೆಗೂ ಬಾಲ್ಯವನ್ನು ನೆನಪಿಸಿಕೊಂಡು ಸಂತೋಷಪಡುತ್ತಿದ್ದರು. ಒಮ್ಮೆ ತಾಯಿಯ ಅಜ್ಜಿ ಶ್ರಾದ್ಧಕ್ಕಾಗಿ ಇನ್ನೊಂದು ಊರಿಗೆ ಹೋಗಬೇಕಿತ್ತು. ತಾಯಿಯ ಜೊತೆಯಲ್ಲಿ ಹಂದೆಯವರು ಹೊರಟರು. ಕಾಲ್ನಡಿಗೆ ಎಂದು ಬೇರೆ ಹೇಳಬೇಕಿಲ್ಲವಲ್ಲ. ದಾರಿ ಮಧ್ಯದಲ್ಲಿ ಸಿಗುವ ಹೊಳೆಯನ್ನು ಇಳಿದು ನಡೆದು ದಾಟಿದರು. ಸಂಜೆ ಹಿಂತಿರುಗಿ ಬರುವಾಗ ಸಮುದ್ರದ ಅಂಚಾದ ಕಾರಣ, ಸಮುದ್ರದ ಭರತಕ್ಕೆ ನದಿಯ ಹಿನ್ನೀರು ತುಂಬಿತ್ತು. ಆಗ ಚಿಕ್ಕವರಾದ ಹಂದೆಯವರನ್ನು ಬಟ್ಟೆಯಿಂದ ಸೊಂಟಕ್ಕೆ ಕಟ್ಟಿಕೊಂಡು, ವಡೆಯ ಪಾತ್ರೆಯನ್ನು ತಲೆಯ ಮೇಲಿಟ್ಟುಕೊಂಡು ಹಂದೆಯವರ ತಾಯಿ ನದಿಯನ್ನು ದಾಟಿದರಂತೆ!! ಇಂತಹ ಹಲವಾರು ಪ್ರಸಂಗಗಳನ್ನು ಆಗಾಗ ನೆನಪಿಸಿಕೊಳ್ಳುತ್ತಲೇ ಇರುತ್ತಿದ್ದರು.

ಎಲ್ಲಾ ಮಕ್ಕಳಂತೆ ಶಾಲೆಗೆ ಆಗಾಗ ರಜೆ ಹಾಕುವ ಅಭ್ಯಾಸವಿದ್ದರೂ ಓದಿನಲ್ಲಿ ಮಾತ್ರ ಮುಂದಿದ್ದರು. ಪ್ರಾಥಮಿಕ ವಿದ್ಯಾಭ್ಯಾಸ ಗಿಳಿಯಾರು ಸರ್ಕಾರಿ ಶಾಲೆಯಲ್ಲಿ ನಡೆಯಿತು. ಎರಡು ವರ್ಷ ಕೋಟ ಹೈಸ್ಕೂಲಿನಲ್ಲಿ ಓದಿದರು. ಆನಂತರ ಹಂದೆಯವರ ಅಣ್ಣ ರಾಮಕೃಷ್ಣ ಹಂದೆಯವರು ಪಾಠ ಮಾಡುತ್ತಿದ್ದ ಬ್ರಹ್ಮಾವರದ ಎಸ್.ಎಂ.ಎಸ್ ಹೈಸ್ಕೂಲ್‌ನಲ್ಲಿ ಎಸ್.ಎಸ್.ಎಲ್.ಸಿ.ಯನ್ನು ಮುಗಿಸಿದರು. ಮುಂದೆ ಉಡುಪಿಯ ಪಿ.ಪಿ.ಸಿ.ಯಲ್ಲಿ ಪಿ.ಯು.ಸಿ.ಯೂ ಆಯಿತು. ಹಂದೆಯವರಿಗೆ ಮೆಡಿಕಲ್ ಓದುವ ಬಯಕೆ ಉತ್ಕಟವಾಗಿತ್ತು. ಆದರೆ ಅತ್ಯಂತ ಕಡಿಮೆ ಅಂಕದಲ್ಲಿ ಸರ್ಕಾರಿ ಕೋಟಾದ ಸೀಟು ಕೈತಪ್ಪಿತು. ಡೊನೇಶನ್ ಕೊಟ್ಟು ಓದಿಸುವ ಸ್ಥಿತಿಯಂತೂ ಪಾಲಕರಿಗೆ ಇರಲಿಲ್ಲ . ಮುಂದೆ ಹುಬ್ಬಳ್ಳಿಯಲ್ಲಿ ಬಿ.ಎಸ್.ಸಿ. ಪದವಿಯನ್ನು ಪಡೆದರು. ಒಂದು ವರ್ಷಗಳ ಕಾಲ ಕೋಟ ಹೈಸ್ಕೂಲಿನಲ್ಲಿ ವಿಜ್ಞಾನದ ಪಾಠವನ್ನು ಮಾಡಿ, ನಂತರ ಬಹುದಿನದ ಕನವರಿಕೆ ಈಡೇರಿದಂತೆ ಬಳ್ಳಾರಿಯ ಮೆಡಿಕಲ್ ಕಾಲೇಜಿನಲ್ಲಿ ಸ್ಕಾಲರ್ಶಿಪ್ ಪಡೆದು ಎಂ.ಬಿ.ಬಿ.ಎಸ್. ಪದವಿಯನ್ನು ಮುಗಿಸಿದರು.

1971ರಲ್ಲಿ ಭಾರತ ಬಾಂಗ್ಲಾ ಯುದ್ಧ ಪ್ರಾರಂಭವಾದಾಗ ಇವರ ಮೆಡಿಕಲ್ ಕಾಲೇಜಿನಿಂದಲೇ 30 ವೈದ್ಯರ ತಂಡವೊಂದು ಹೊರಟಿತು. ಅದಕ್ಕೆ ಹಂದೆಯವರನ್ನೆ ಟೀಮ್ ಲೀಡರನ್ನಾಗಿಸಿದ್ದರು. ಹೀಗೆ ಬಾಂಗ್ಲಾ ಗಡಿಪ್ರದೇಶದ ನಿರಾಶ್ರಿತರ ಶಿಬಿರದಲ್ಲಿ ಮೂರು ತಿಂಗಳ ಕಾಲ ಸೇವೆಸಲ್ಲಿಸಿ ಬಂದರು. ಮುಂದೆ ಬ್ರಹ್ಮಾವರ, ಉತ್ತರ ಕನ್ನಡದ ಮಂಕಿ ಹಾಗೆ ಶ್ರೀಲಂಕಾದ "ಬಡಲ್ ಕುಂಬೂರ" ಮುಂತಾದ ಕಡೆ ಸರ್ವಿಸ್ ಮಾಡಿ 81– 82ರಲ್ಲಿ ಬೆಂಗಳೂರಿಗೆ ಬಂದರು. ಚಾಮರಾಜಪೇಟೆ ಹಾಗೂ ಮಾಗಡಿ ರಸ್ತೆಯಲ್ಲಿ ಕುಟುಂಬ ವೈದ್ಯರಾಗಿ ಸೇವೆಯನ್ನು ಪ್ರಾರಂಭಿಸಿದರು. ಕೆಲಸದ ಒತ್ತಡ ಹೆಚ್ಚಾದಂತೆ ಮಾಗಡಿಯ ರಸ್ತೆಯಲ್ಲಿ ಮಾತ್ರ ಕ್ಲಿನಿಕ್ಕನ್ನು ಮುಂದುವರಿಸಿದರು.

ಅನೇಕ ಪ್ರಶಸ್ತಿಗಳು ಹಂದೆಯವರಿಗೆ ಸಂದರೂ, ಗುಣಮುಖರಾದ ರೋಗಿಗಳ ಕೃತಜ್ಞತೆಯ ಮಾತು, ನಗುವನ್ನೇ ಬಹುದೊಡ್ಡ ಪ್ರಶಸ್ತಿ ಎಂದು ಸದಾ ಅಂದುಕೊಳ್ಳುತ್ತಿದ್ದರು. ಅದರ ಪರಿಣಾಮವೇ ಈ ಲೇಖನದ ಸರಣಿ.

ಪುಸ್ತಕವನ್ನು ಮಾಡಬೇಕೆಂಬ ಆಲೋಚನೆ ನನ್ನದಾದರೂ ಈ ವಿಷಯದಲ್ಲಿ ನನಗೆ ತಿಳುವಳಿಕೆ ಇರಲಿಲ್ಲ. ಮೊದಲಾಗಿ ಹಂದೆಯವರು ಬರೆದ ಲೇಖನಗಳನ್ನು ನನ್ನ ತಮ್ಮನ ಹೆಂಡತಿ, ಅತ್ತಿಗೆಯಾದ ಶ್ರೀಮತಿ ಕಮಲಾಕ್ಷಿ ಹೆರ್ಳೆಗೆ ಕೊಟ್ಟೆ. ಅವಳು ಈ ಲೇಖನಗಳಿಗೆ ಒಂದಷ್ಟು ಕಾಯಕಲ್ಪವನ್ನು ನೀಡಿದಳು. ಆಮೇಲೆ ಶ್ರೀಪಾದ ಗದ್ದೆ ಸಾಧ್ಯವಾದಷ್ಟು ಲೇಖನಗಳನ್ನು ಸಾಹಿತ್ಯದ ರೂಪಕ್ಕೆ ಬದಲಿಸಿದರು. ಹಾಗೆ ಮಂಟಪ ಪ್ರಭಾಕರ ಉಪಾಧ್ಯರು, ನಟರಾಜ ಉಪಾಧ್ಯರು ಸಾಕಷ್ಟು ಸಲಹೆ ಸಹಕಾರವನ್ನು ನೀಡಿದರು.

ಶಿವಮೊಗ್ಗದ ನಂಜಪ್ಪ ಆಸ್ಪತ್ರೆಯ ಡಾಕ್ಟರ್ ರತ್ನಾಕರವರು ಬಿಡುವಿಲ್ಲದ

ತಮ್ಮ ಕೆಲಸದ ನಡುವೆ ಈ ಪುಸ್ತಕಕ್ಕೆ ಮುನ್ನುಡಿಯೊಂದನ್ನು ಬರೆದು ಕೊಟ್ಟಿದ್ದಾರೆ.

ಈ ಮೊದಲೇ ಹಂದೆಯವರ ರೇಖಾಚಿತ್ರವನ್ನು ಬಿಡಿಸಿದ ವಿನಯ ಹೆಗಡೆ, ನಮ್ಮ ಪುಸ್ತಕಕ್ಕಾಗಿ ಆ ಚಿತ್ರವನ್ನು ಕೊಟ್ಟು ಸಹಕರಿಸಿದ್ದಾರೆ. ಸೀಮಿತ ಕಾಲಾವಕಾಶದಲ್ಲಿ ಗಾಯತ್ರಿ ಪ್ರಿಂಟ್ಸ್‌ನ ಶ್ರೀ ಸತೀಶ ಹಾಗೂ ಶ್ರೀ ರಜನೀಶ ಅವರು ಉತ್ತಮವಾಗಿ ಪುಸ್ತಕವನ್ನು ಮಾಡಿಕೊಟ್ಟಿದ್ದಾರೆ.

ನನ್ನ ಆಲೋಚನೆ ಪುಸ್ತಕವಾಗುವಲ್ಲಿ ಸಹಕರಿಸಿದ ಈ ಎಲ್ಲರಿಗೂ ನನ್ನ ಕುಟುಂಬದವರೆಲ್ಲರ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

**ಕೆ. ಜಯಂತಿ ಎಸ್. ಹಂದೆ.**

(ಡಾಕ್ಟರ್ ಸುಬ್ಬಣ್ಣ ಹಂದೆಯವರ ಪತ್ನಿ)

# ತುರಿಕೆಯ ಮೂಲ

ಮಾನವನ ಬುದ್ಧಿಶಕ್ತಿಯ ವಿಶೇಷದಿಂದ ವಿಜ್ಞಾನದ ಉಪಉತ್ಪನ್ನವಾಗಿ, ಎಲ್ಲಾ ಕ್ಷೇತ್ರಗಳಲ್ಲೂ ಸೌಕರ್ಯವೊಂದು ಒದಗಿದ್ದು ಸತ್ಯ. ಅದೇ ಪರಿಪೂರ್ಣವೆಂದು ಈ ಉಪಕರಣಗಳಲ್ಲೋ, ಸೌಕರ್ಯಗಳಲ್ಲೋ ನಮ್ಮ ತಲೆಯನ್ನು ಇಡುವುದು, ಪ್ರಕೃತಿದತ್ತವಾದ ಬುದ್ಧಿಶಕ್ತಿಯ ನಿಷ್ಕ್ರಿಯತೆಯೆಂದೆ ಹೇಳಬಹುದು! ವೈದ್ಯಕೀಯ ಕ್ಷೇತ್ರವು ಇದರಿಂದ ಹೊರತಾದುದಲ್ಲ.

ಇದು ಸುಮಾರು 20 ವರ್ಷಗಳ ಹಿಂದಿನ ಘಟನೆ. ರೋಗಿಯನ್ನು ಪರೀಕ್ಷಿಸಿ ಕಾಯಿಲೆಯ ಮೂಲವನ್ನು ಪತ್ತೆ ಹಚ್ಚುವುದು ಸಾಮಾನ್ಯ ಕ್ರಮ. ಆದರೆ ಸೀರೆಯನ್ನು ಪರೀಕ್ಷಿಸಿ, ಕಾಯಿಲೆಯ ಜಾಡನ್ನು ಹುಡುಕುವ ಸಂದರ್ಭವೂ ಬರುತ್ತದೆ. ಉಡುಪಿಯಲ್ಲಿ ವಾಸವಿರುವ ನನ್ನ ಸಂಬಂಧಿ ಮಹಿಳೆಯೊಬ್ಬರಿಗೆ ಚರ್ಮದ ಅಲರ್ಜಿ ಪ್ರಾರಂಭವಾಯಿತು. ಇದಾದರೂ ದೇಹದಲ್ಲೆಲ್ಲಾ ತುರಿಕೆ ಪ್ರಾರಂಭವಾಗಿ, ದಡಿಗಳು ಎಳುತ್ತಿತ್ತು. ಇವರು ಈ ಅಲರ್ಜಿಯ ವಿಷಯವನ್ನು ನನಗೆ ಹೇಳುವಾಗ ಅದು ಪ್ರಾರಂಭವಾಗಿ, ಆರು ತಿಂಗಳು ಕಳೆದಿತ್ತು. ಆ ಮಹಿಳೆಗಾದರೊ ಸುಮಾರು 55 ವರ್ಷದ ಪ್ರಾಯ. ಜೊತೆಯಲ್ಲಿ ಮಧುಮೇಹವು ಪ್ರಾರಂಭವಾಗಿತ್ತು. ಈ ಅಸಹನೀಯ ಕಾಯಿಲೆಗಾಗಿ, ಮಣಿಪಾಲದ ಕೆಎಂಸಿ ಆಸ್ಪತ್ರೆಯಲ್ಲಿ ಚರ್ಮರೋಗ ತಜ್ಞರಿಂದ ಔಷಧಿಯನ್ನು ಪಡೆದು ಉಪಯೋಗಿಸಿದ್ದರು. ಆದರೆ ಔಷಧಿಯನ್ನು ನಿಲ್ಲಿಸುತ್ತಿದ್ದಂತೆ ಅಲರ್ಜಿ ಉಲ್ಬಣವಾಗುತ್ತಿತ್ತು.

ನಾನು ಯಾವುದೋ ಕಾರ್ಯ ನಿಮಿತ್ತ ಅವರ ಮನೆಗೆ ಹೋದಾಗ, ಡಾಕ್ಟರಾದ ನನ್ನಲ್ಲಿ ಈ ಕಾಯಿಲೆಯ ಪ್ರಸ್ತಾಪ ಬರುವುದು ಸಹಜವೆ. ಈ ಕಾಯಿಲೆಯ ಪ್ರಾರಂಭದಿಂದ ಇಲ್ಲಿಯವರೆಗೆ ಔಷಧೋಪಚಾರಗಳನ್ನು, ಕಾಯಿಲೆ ಬಂದಾಗ ಆಗುವ ಪರಿಣಾಮ ಲಕ್ಷಣಗಳನ್ನು ವಿವರವಾಗಿ ತಿಳಿಸಿದರು. ಸಮಾರಂಭ, ಅಲ್ಲಿ ಸೇರುವವರ ನಡುವೆ ಹೊಸತಾದ, ವಿಶೇಷವಾದ ಸೀರೆ ಒಡವೆ ಇತ್ಯಾದಿಗಳ ಪ್ರದರ್ಶನದ ಆಸಕ್ತಿಯು ಮಹಿಳೆಯರಲ್ಲಿ ಸಹಜವಷ್ಟೇ! ಹೀಗೆ ಈ ಮಹಿಳೆಗೆ ವಿಶೇಷವಾದ ಸೀರೆಯನ್ನು ಉಟ್ಟು ಸಮಾರಂಭಕ್ಕೆ ಹೋರಟಾಗ ಮಾತ್ರ ಈ ಕಾಯಿಲೆ ಕಾಣಿಸಿಕೊಳ್ಳುತ್ತಿತ್ತು, ಎಂಬ ವಿಷಯವನ್ನು ತಿಳಿಸಿದರು. ಸಮಾರಂಭದ ಊಟದಲ್ಲಿ ಬಳಸುವ ಎಣ್ಣೆಯೊ, ಬದನೆಕಾಯಿ, ನುಗ್ಗೆಕಾಯಿಯಂತ ಯಾವುದೋ ತರಕಾರಿಗಳು ಇವರಿಗೆ ಅಲರ್ಜಿ ಇರಬಹುದೆಂದು ವಿವರಿಸಿದೆ.

ಆಗ ಆ ಮಹಿಳೆ 'ಇಲ್ಲ ನಾನು ಸೀರೆಯುಟ್ಟು ಮನೆಯಿಂದ ಹೊರಟಾಗಲೇ ಪ್ರಾರಂಭವಾಗುತ್ತದೆ' ಎಂದರು. ಆಗ ಇದು ಇವರಿಗೆ ಮನಸ್ಸಿನ ಸಮಸ್ಯೆ ಇರಬಹುದು ಎಂಬ ಸಂಶಯ ಕಾಡಿತು. ಇದು ಹೇಗೆಂದರೆ, ಕೆಲವರಿಗೆ ಈ ರೀತಿಯ ಅಲರ್ಜಿ ಈಗ ಪ್ರಾರಂಭವಾಗುತ್ತದೆ ಎಂದು ಅನಿಸಿದ ಕೂಡಲೇ ಅಲರ್ಜಿ ಶುರುವಾಗಿಬಿಡುತ್ತದೆ. ಪೊಲನ್ ಅಲರ್ಜಿ ಇದ್ದ ಕೆಲವರಿಗೆ, ಟಿವಿಯಲ್ಲಿ ಆ ಹೂವಿನ ಚಿತ್ರವನ್ನು ನೋಡಿದಾಕ್ಷಣ ಸೀನು ಬರಲು ಪ್ರಾರಂಭವಾಗುತ್ತದೆ. ಹಾಗಾಗಿ ಇದು ಈ ರೀತಿಯಾಗಿ ನಿಮ್ಮ ಮನಸ್ಸಿಗಂಟಿದ ಅಲರ್ಜಿ ಇರಬಹುದು ಎಂದು ಹೇಳಿದೆ. ಆದರೆ ಆ ಮಹಿಳೆ ಅದಕ್ಕೂ ಒಪ್ಪಲಿಲ್ಲ.

ಆಗ ನನಗೆ ಇನ್ನೊಂದು ಯೋಚನೆ ಮನಸ್ಸಿಗೆ ಬಂತು ನಾನೀಗ ಡಾಕ್ಟರ್ ಆಗಿ ಯೋಚಿಸುವುದಕ್ಕಿಂತ ಶೆರ್ಲಾಕ್ ಹೋಮ್ಸ್ ತರ ಯೋಚಿಸತೊಡಗಿದೆ. ಸಮಾರಂಭಕ್ಕೆ ಹೆಚ್ಚಾಗಿ ಜರಿ ಸೀರೆಯನ್ನು ಉಡುವುದಾಗಿ ಆ ಮಹಿಳೆ ಹೇಳಿದಳು. ಅದರಿಂದ ಸಮಾರಂಭಗಳಿಗಾಗಿ ಅವಳು ಉಡುವ ಕೆಲವು ಸೀರೆಗಳನ್ನು ತರಲು ಹೇಳಿದೆ. ಹಾಗೆ ತಂದ ಸೀರೆಯೊಂದರ ಅಂಚನ್ನು ಅವರ ಕೈಗೆ ಚೆನ್ನಾಗಿ ಉಜ್ಜಿದೆ. ಆದರೆ ಆ ಜರಿಯ ಅಲರ್ಜಿಯು ಅವಳಿಗೆ ಇರಲಿಲ್ಲ. ಸೀರೆಯ ಜರಿಯನ್ನು ಉಜ್ಜಿದ ಚರ್ಮದ ಭಾಗದಲ್ಲಿ ಯಾವ ವ್ಯತ್ಯಾಸವೂ ಆಗಲಿಲ್ಲ. ನಂತರ ನಿಧಾನವಾಗಿ ಸೀರೆಯನ್ನು ಬಿಡಿಸಿ ಮಡಿಕೆಗಳನ್ನೆಲ್ಲ ನೋಡಿದೆ. ಆಮೇಲೆ ಔಷಧೀಯ ಬದಲಾಗಿ ಒಂದು ಉಪಾಯವನ್ನು ಆ ಮಹಿಳೆಗೆ ಸೂಚಿಸಿದೆ.

ಸಮಾರಂಭಗಳಿಗೆ ಹೋಗುವ ಮೊದಲು ಸೀರೆಯನ್ನು ಚೆನ್ನಾಗಿ ಇಸ್ತ್ರಿ ಮಾಡಿ ಉಟ್ಟುಕೊಂಡು ಹೋಗಿ ಎಂದು ಸಲಹೆಯನ್ನು ಕೊಟ್ಟೆ.

ನನ್ನ ಉಪಾಯ ಔಷಧಿಯಾಗಿ ಪರಿಣಾಮವನ್ನು ಬೀರಿತು. ಮುಂದಿನ ಸಮಾರಂಭದಲ್ಲಿ ಆ ಮಹಿಳೆಯು ಯಾವ ತುರಿಕೆಯೂ ಇಲ್ಲದೆ, ಸಂತೋಷದಿಂದ ಎಲ್ಲರಲ್ಲೂ ಮಾತು ಕಥೆಗಳನ್ನು ಮುಗಿಸಿಕೊಂಡು ಬಂದಿದ್ದರು. ಆ ದಿನ ಆ ಮಹಿಳೆ ಮಡಚಿಟ್ಟ ಸೀರೆಯನ್ನು ಗಮನಿಸುವಾಗ, ಸೀರೆಯ ಮಡಕೆಯಲ್ಲಿ ಬಿಳಿಯ ಕೀಟಗಳು ಕಂಡಿತು. ಅದು ಜರಿ ಹುಳವೆಂದು ಕರೆಯುವ book worm ಅಲ್ಲಿ ಮನೆ ಮಾಡಿತ್ತು. ಸಹಜವಾಗಿಯೇ ಉಡುಪಿಯ ಸೆಖೆಗೆ ಸಾಕಷ್ಟು ಮೈ ಬೆವರುತ್ತದೆ. ಪ್ರತಿ ಬಾರಿಯೂ ತೊಳೆಯಲಿಕ್ಕಾಗದ ರೇಷ್ಮೆ ಸೀರೆಗಳನ್ನು, ಹಾಗೆ ಮಡಚಿ ಕಪಾಟಿನಲ್ಲಿಡುವುದು ನಡೆಯುತ್ತದೆ. ಹೀಗೆ ಬೆವರಿನಿಂದ ಒದ್ದೆಯಾದ ಭಾಗದಲ್ಲಿ ಜರಿ ಹುಳುಗಳು ಮನೆ ಮಾಡುತ್ತಿತ್ತು. ಈ ಹುಳಗಳಿಂದ ಮಹಿಳೆಗೆ ಮೈತುರಿಕೆ ಉಂಟಾಗುತ್ತಿತ್ತು. ಐರನ್ ಮಾಡುವುದರಿಂದ ಆ ಹುಳುಗಳು ಸಾಯುತ್ತಿದ್ದವು. ಅದರಿಂದ ತುರಿಕೆಯೂ ಕಡಿಮೆಯಾಯಿತು.

ಹೀಗೆ ಅಲರ್ಜಿ ಎನ್ನುವಾಗ ನಾನು ನೋಡುವ ದೃಷ್ಟಿಕೋನವು ಸ್ವಲ್ಪ ಬದಲಾಯಿತು. ಒಮ್ಮೆ ನಮ್ಮ ಕ್ಲಿನಿಕ್ಕಿಗೆ ರಮೇಶ ಎಂಬ ಯುವಕರೊಬ್ಬರು ಬಂದರು. ಅವರಿಗೆ ಹಣೆಯ ಮೇಲೆ ಸುಮಾರು ಎರಡು ಮಿಲಿ ಮೀಟರ್

ಅಗಲದಲ್ಲಿ, ಸಣ್ಣ ಸಣ್ಣ ಗುಳ್ಳೆಗಳಿದ್ದವು ಮತ್ತು ಆ ಗುಳ್ಳೆಗಳಿಗೆ ತುಂಬಾ ತುರಿಕೆಯೂ ಇತ್ತು. ಬಿಸಿಲಿನಲ್ಲಿ ಸ್ಕೂಟರ್ ಸವಾರಿ ಮಾಡಿದಾಗ ಈ ರೀತಿ ಆಗುತ್ತದೆ ಎನ್ನುವುದನ್ನು ಹೇಳಿದರು. ರಮೇಶರು ಅದಾಗಲೇ ಕೆಲವು ಚರ್ಮರೋಗ ವೈದ್ಯರನ್ನು ಸಂಪರ್ಕಿಸಿಯು ಇದ್ದರು. ಅವರಾದರೂ ಮನೆಯಲ್ಲಿರುವಾಗ ಏನೂ ತೊಂದರೆ ಇಲ್ಲದೆ, ಬಿಸಿಲಿನಲ್ಲಿ ಮಾತ್ರ ಈ ತೊಂದರೆ ಕಾಣಿಸಿಕೊಳ್ಳುತ್ತದೆ ಎನ್ನುವ ಕಾರಣಕ್ಕೆ, ಇದು ಬಿಸಿಲಿನಿಂದಾದ ಅಲರ್ಜಿ ಎಂದು ಔಷಧಿಗಳನ್ನು ಕೊಟ್ಟಿದ್ದರು. ಆದರೆ ಅದಾವುದು ಪರಿಣಾಮವಾಗದೆ ಸ್ನೇಹಿತರ ಸಲಹೆ ಮೇರೆಗೆ ರಮೇಶ ನನ್ನಲ್ಲಿಗೆ ಬಂದಿದ್ದರು.

ಇದು ಬಿಸಿಲಿನಿಂದ ಆಗುವ ಸಮಸ್ಯೆಯಾದರೆ ದೇಹದ ಇನ್ನಿತರ ಭಾಗದಲ್ಲಿಯೂ ಕಾಣಿಸಿಕೊಳ್ಳಬೇಕಿತ್ತು, ಆದರೆ ಮತ್ತೆಲ್ಲಿಯೂ ಕಾಣದ ಈ ತುರಿಕೆ, ಹೆಲ್ಮೆಟ್ ತಾಗುವ ಹಣೆಯ ಭಾಗದಲ್ಲಿ ಮಾತ್ರ ಆಗಿತ್ತು. ಇದರಿಂದ ಹೆಲ್ಮೆಟ್ ಒಳಗಿನ ಪ್ಲಾಸ್ಟಿಕ್ ಅಥವಾ ಪಾಲಿಥಿನ್ ಲೈನಿಂಗ್ ಬೆವರಿಗೆ ತಾಗಿ, ರಿಯಾಕ್ಷನ್ ಆಗಿ ಅಲರ್ಜಿ ಆಗಿರಬಹುದು ಎಂದು ಊಹಿಸಿದೆ. ಯಾವುದಕ್ಕೂ ಒಮ್ಮೆ ಹೆಲ್ಮೆಟ್ ನೋಡೋಣ ಎಂದು, ರಮೇಶ ಅವರಲ್ಲಿ 'ನಿಮ್ಮ ಹೆಲ್ಮೆಟ್ಟನ್ನು ಸ್ವಲ್ಪ ಕೊಡಿ, ನೋಡುವ' ಎಂದೆ. ಜೊತೆಗೆ ಎಷ್ಟು ಸಮಯದಿಂದ ಈ ಹೆಲ್ಮೆಟ್ ಅನ್ನು ಉಪಯೋಗಿಸುತ್ತಿದ್ದೀರಿ? ಅಲರ್ಜಿ ಯಾವಾಗನಿಂದ ಪ್ರಾರಂಭವಾಯಿತು? ಎಂಬಿತ್ಯಾದಿ ಪ್ರಶ್ನೆಗಳನ್ನು ಕೇಳಿದೆ. ಸ್ವಲ್ಪ ಗಲಿಬಿಲಿಗೊಂಡ ರಮೇಶ, ನನ್ನ ಊಹೆಯನ್ನು ತಿರಸ್ಕರಿಸುವಂತೆ 'ಇದು ಹೆಲ್ಮೆಟ್‌ನಿಂದಾದ ತೊಂದರೆ ಅಲ್ಲ. ಈಗ ಸುಮಾರು ನಾಲ್ಕೈದು ವರ್ಷಗಳಿಂದ ಈ ಹೆಲ್ಮೆಟ್ಟನ್ನು ಉಪಯೋಗಿಸುತ್ತಿದ್ದೇನೆ. ಆದರೆ ಈ ಅಲರ್ಜಿ ಪ್ರಾರಂಭವಾಗಿ ಕೇವಲ ಒಂದುವರೆ ತಿಂಗಳಾಯಿತು' ಎಂದು ಉತ್ತರಿಸಿದರು. ಹೆಲ್ಮೆಟ್ ನೀಡಲು ಹಿಂದೆ ಮುಂದೆ ನೋಡುತ್ತಿದ್ದ ರಮೇಶನ ಕೈಯಿಂದ ಹೆಲ್ಮೆಟ್ಟನ್ನು ತೆಗೆದುಕೊಂಡು, ಒಳಭಾಗವನ್ನೆಲ್ಲಾ ಸೂಕ್ಷ್ಮವಾಗಿ ಪರೀಕ್ಷಿಸತೊಡಗಿದೆ. ರಮೇಶವರಿಗೆ ಇದೇನಪ್ಪಾ! ಟ್ರಾಫಿಕ್ ಪೊಲೀಸರ ಕೆಲಸವನ್ನು ಈ ಡಾಕ್ಟ್ರು ಮಾಡುತ್ತಿದ್ದಾರೆ ಎಂದು ಕಿರಿಕಿರಿಯಾಯಿತೇನೊ! ಅಪರಾಧಿಯ ಪತ್ತೆಗಾಗಿ ಸಣ್ಣ ಸಣ್ಣ ಕುರುಹನ್ನು ಹುಡುಕುವ ಪೊಲೀಸನಂತೆ, ರೋಗ ಮೂಲವನ್ನು ಹುಡುಕುವ ವೈದ್ಯನಿಗೂ ಯಾವುದೋ ಸಣ್ಣ ಕುರುಹು ರೋಗ ಮೂಲವನ್ನು ಹೇಳುವುದು.

ನನ್ನ ಹುಡುಕಾಟ ಫಲಪ್ರದವಾಯಿತು. ನಾನಂದುಕೊಂಡಂತೆ ಚಿಕಿತ್ಸೆಯನ್ನು ಹೆಲ್ಮೆಟ್ಟಿಗೆ ಕೊಡಬೇಕಾಗಿತ್ತು. ಹೆಲ್ಮೆಟ್ ಹಣೆಗೆ ತಾಗುವ ಭಾಗದಲ್ಲಿ ಹೊಲಿಗೆ ಇತ್ತು. ಅದರಿಂದ ತಿಗಣೆ ಮರಿಗಳು (bed bug) ಹೊರಬೀಳುತ್ತಿದ್ದವು. ಅವುಗಳು ರಮೇಶನ ಹಣೆಯನ್ನು ಕಚ್ಚುತ್ತಿದ್ದವು. ಅದರಿಂದಲೇ ತುರಿಕೆ ದದ್ದುಗಳು ಆಗುತ್ತಿದ್ದವು. ರಮೇಶನಿಗೆ ಆ ತಿಗಣೆ ಮರಿಗಳನ್ನು ತೋರಿಸಿದೆ. ರೋಗದ ಮೂಲ ಪತ್ತೆಯಾಗದಿದ್ದಾಗ, ಬಿಸಿಲು, ಆಹಾರ, ಬಟ್ಟೆ ಇತ್ಯಾದಿಯಾಗಿ

ಹೇಳುತ್ತೇವೆ. ಆದರೆ ನಿಮ್ಮ ಅಲರ್ಜಿಯ ಮೂಲ ಹೆಲ್ಮೆಟ್ಟಿನಲ್ಲಿರುವ ತಿಗಣೆಗಳು. ನೀವು ಎಲ್ಲೋ ಹೆಲ್ಮೆಟ್ಟನ್ನು ಇಟ್ಟಾಗ ಸೇರಿಕೊಂಡ ತಿಗಣೆಗಳು ವಂಶಾಭಿವೃದ್ಧಿಯನ್ನು ಮಾಡಿವೆ. ಹೆಲ್ಮೆಟ್ಟನ್ನು ಬಿಸಿ ನೀರಲ್ಲಿ ಮುಳುಗಿಸಿ ಒಣಗಿಸಿ ಧರಿಸಿ ನಿಮ್ಮ ಅಲರ್ಜಿ ಮಾಯವಾಗುವುದು ಎಂದೆ.

ಅಲರ್ಜಿ ಕಥೆಗಳನ್ನು ಓದಿ ನಿಮಗೆ ಲೇಖನದ ಅಲರ್ಜಿ ಆಗದಿರಲಿ! ಅದಕ್ಕಾಗಿ ನನಗೇ ಅಲರ್ಜಿ ಆದ ಅನುಭವದೊಂದಿಗೆ ಈ ಲೇಖನವನ್ನು ಮುಗಿಸುತ್ತೇನೆ. ನಾನು ಮತ್ತು ಜಯಂತಿ 2016ರಲ್ಲಿ ಕ್ಯಾಲಿಫೋರ್ನಿಯದಲ್ಲಿರುವ ಮಗಳ ಮನೆಗೆ ಹೋಗಿದ್ದೆವು. ಬೆಂಗಳೂರಿನಿಂದ ಕ್ಯಾಲಿಫೋರ್ನಿಯಾಗೆ ವಿಮಾನದಲ್ಲಿ ಸುಮಾರು 22 ಗಂಟೆಗಳ ಪ್ರಯಾಣ. ದೂರದಲ್ಲಿರುವ ಮಗಳು ಆರತಿಗೆ, ಅಪ್ಪ-ಅಮ್ಮನನ್ನು ಕಂಡ ಸಂಭ್ರಮ. ನಮಗೆ ಮಗಳು, ಅಳಿಯ, ಮೊಮ್ಮಕ್ಕಳೊಂದಿಗೆ ಸಂಭ್ರಮಿಸುವ ಕಾಲ. ಹಾಗಾಗಿ ಕೆಲವೇ ಕ್ಷಣಗಳೆಂಬಂತೆ ಎರಡು ದಿನಗಳು ಕಳೆದು ಹೋಯಿತು.

ಹೀಗೆ ಸಂತೋಷದಲ್ಲಿ ಮೈ ಮರೆತ ಕಾಲದಲ್ಲಿ, ನನ್ನ ಎಡಗಾಲು ತನ್ನ ಅಸ್ತಿತ್ವವನ್ನು ಹೇಳತೊಡಗಿತು. ಎಡಪಾದದ ಗಂಟಿಗಿಂತ ಸ್ವಲ್ಪ ಮೇಲೆ ತೀವ್ರವಾದ ತುರಿಕೆ ಪ್ರಾರಂಭವಾಯಿತು. ರೋಗಿಗಳಿಗೆ ಉಪದೇಶಿಸುವಷ್ಟು ಸುಲಭದಲ್ಲಿ ಅನುಭವಿಸಲು ಸಾಧ್ಯವಿಲ್ಲ ಎಂಬ ತಿಳುವಳಿಕೆ ನನಗೆ ಮೊದಲಾಯಿತು. ಯಾವುದೇ ತುರಿಕೆಯನ್ನು ಉಗುರಿನಿಂದ ಕೆರೆಯಬಾರದು ಎಂದು ನಾವು ಹೇಳುತ್ತೇವೆ, ಆದರೆ ನನಗೆ ಪರಚಿಕೊಳ್ಳದೆ ಇರುವುದಕ್ಕೆ ಸಾಧ್ಯವೇ ಆಗಲಿಲ್ಲ! ಡ್ರೈಸ್ಕಿನ್ ಇರಬಹುದೆಂದು ಯೋಚಿಸಿದೆ. ಆದರೆ ಡ್ರೈಸ್ಕಿನ್ ಕೇವಲ ಪಾದದ ಗಂಟಿನ ಮೇಲ್ಗಡೆ ಮಾತ್ರ ಯಾಕೆ ಆಗುತ್ತದೆ ಎಂಬ ಹೊಳಹು ನನಗೆ ಬರಲೇ ಇಲ್ಲ!

ಎಡಗಾಲಿಗೆ ಪ್ರಾರಂಭವಾದ ತುರಿಕೆ ಬಲಗಾಲಿನ ಅದೇ ಜಾಗಕ್ಕೆ ಪಸರಿಸಿತು. ಹಾಗೆ ಮಗಳ ಮನಸ್ಸಿಗೂ ಹಬ್ಬಿತು. ಅವಳ ಸಂಭ್ರಮವು ಸ್ವಲ್ಪ ಊನವಾಯಿತು. ಹಾಗಾಗಿ ಹತ್ತಿರ ಬಂದ ಮಗಳು ಆರತಿ, ನಿಧಾನವಾಗಿ ಪರೀಕ್ಷಿಸಿದಳು. ಡಾಕ್ಟರಿಗೆ ಬಂದ ಕಾಯಿಲೆಯ ಮೂಲವನ್ನು ಕಂಡುಹಿಡಿದಳು. "ನೀವು ಧರಿಸುವ ಸಾಕ್ಸ್‌ನಿಂದ ಅಲರ್ಜಿ ಆಗಿರಬಹುದು" ಎಂದಳು. ಅವಳೆಂದದ್ದು ಸರಿಯಾಗಿತ್ತು. ನಾನು ಹೊಸದಾದ ಕಾಲು ಚೀಲವನ್ನು ತೊಳೆಯದೆ, ಬೆಂಗಳೂರಿನಿಂದ ಕ್ಯಾಲಿಫೋರ್ನಿಯಾದವರೆಗೂ, ಅಂದರೆ ಹತ್ತಿರ ಹತ್ತಿರ 30 ಗಂಟೆಗಳ ಕಾಲ ಧರಿಸಿದ್ದೆ. ಹೊಸ ಸಾಕ್ಸಿನ ಬಣ್ಣದ ಕೆಮಿಕಲ್ಸ್‌ನಿಂದಾಗಿ ಅಲರ್ಜಿ ಉಂಟಾಗಿತ್ತು. ತದನಂತರ ಸ್ಟಿರಾಯ್ಡ್ ಮುಲಾಮು ಹಾಗೂ ಅಲರ್ಜಿ ಮಾತ್ರೆಗಳನ್ನು ತರಿಸಿಕೊಂಡು ಉಪಶಮನವನ್ನು ಪಡೆದೆ. ಯಾವುದೇ ರೀತಿಯ ಹೊಸ ಬಟ್ಟೆಗಳನ್ನು ತೊಳೆದು ಉಪಯೋಗಿಸುವ ಪದ್ಧತಿ, ನನ್ನದಾಗಿತ್ತು. ಆದರೆ ಪ್ರಯಾಣದ ಗಡಿಬಿಡಿಯಿಂದ ಈ ಬಾರಿ ಸಾಕ್ಸನ್ನು ತೊಳೆಯದೆ ಧರಿಸಿದ್ದರಿಂದ ಈ ಅಲರ್ಜಿಯನ್ನು ಅನುಭವಿಸುವಂತಾಯಿತು.

# ಇದು ಅಸಾಧಾರಣ ಹಲ್ಲುನೋವು

ಮೊಪಾರಾಮ್ ಎನ್ನುವ ರಾಜಸ್ಥಾನಿ, ಬೆಂಗಳೂರು ಸೇರಿ, ಇಲ್ಲಿನ ಚಿಕ್ಕಪೇಟೆಯಲ್ಲಿ ಎಲೆಕ್ಟ್ರಿಕಲ್ ಹೋಲ್ ಸೇಲ್ ವ್ಯಾಪಾರಿಯಾಗಿದ್ದರು. ಅವರ ಮನೆ, ಮಾಗಡಿ ರೋಡಿನ ನನ್ನ ಕ್ಲಿನಿಕ್ ಪಕ್ಕದಲ್ಲಿತ್ತು. ಸುಮಾರು ಇಪ್ಪತ್ತು ವರ್ಷಗಳಿಗಿಂತಲೂ ಅಧಿಕ ಸಮಯದಿಂದ ಅವರ ಕುಟುಂಬ ಚಿಕಿತ್ಸೆಗೆ ನನ್ನಲ್ಲಿಗೇ ಬರುತ್ತಿತ್ತು. ಹೀಗೆ ಒಂದು ನಾಲ್ಕೈದು ವರ್ಷಗಳ ಹಿಂದೆ, ಮೋಪಾರಾಮರು ನನ್ನ ಕ್ಲಿನಿಕ್ಕಿಗೆ ಬಂದು, "ಡಾಕ್ಟರ್ ಸಾಬ್, ಆಪ್ ಕೋ ಅಚ್ಛಾ ಡೆಂಟಲ್ ಡಾಕ್ಟರ್ ಮಾಲೂಮ್ ಹೈ? ಮೇರಾ ದೋಸ್ತ್, ಅಶೋಕ್ ರಾಮ್ ಕೋ ಸಾತ್ ಆಠ್ ಮಹಿನೆಸೇ ದಾಂತ್ ಕ ದರ್ದ ಹೈ. ಉಧರ್ ರಾಜಸ್ತಾನೆ ಮೇ ಬಿ ದಿಖಾಯ. ಓರ್ ಇದರ್ ಬೆಂಗಳೂರು ಮೇ ಭಿ. ಲೇಕಿನ್ ಅಚ್ಛಾ ನಹಿ ಹುವಾ" ಎಂದು ಹಿಂದಿಯಲ್ಲಿ ಹೇಳಿದ. (ಅವನ ಸ್ನೇಹಿತ ಅಶೋಕ್ ರಾಮ್‌ಗೆ ಏಳೆಂಟು ತಿಂಗಳುಗಳಿಂದ ಹಲ್ಲು ನೋವು, ರಾಜಸ್ಥಾನ ಹಾಗೂ ಬೆಂಗಳೂರಿನ ಕೆಲವು ಹಲ್ಲಿನ ಸ್ಪೆಷಲಿಸ್ಟ್‌ಗಳ ಬಳಿ ಚಿಕಿತ್ಸೆಯನ್ನು ಪಡೆದರೂ ಪ್ರಯೋಜನವಾಗಲಿಲ್ಲ) ಎಂದು ಹೇಳಿದ. ಹಾಗೆ ನಿಮಗೆ ಯಾರಾದರೂ ಒಳ್ಳೆಯ ಡೆಂಟಿಸ್ಟ್ ಪರಿಚಯವಿದೆಯಾ? ಎಂದು ವಿಚಾರಿಸಿದ. ಹಲ್ಲಿನ ಸಮಸ್ಯೆ ಇಷ್ಟೊಂದು ಕಡೆ ಡಾಕ್ಟರ್‌ಗಳಿಗೆ ತೋರಿಸಿದರು ಪ್ರಯೋಜನವಾಗಲಿಲ್ಲ ಎನ್ನುವ ವಿಚಾರ ನನಗೆ ಆಶ್ಚರ್ಯದ ಜೊತೆಗೆ ಕುತೂಹಲವನ್ನುಂಟು ಮಾಡಿತ್ತು.

"ಸರಿ ಒಮ್ಮೆ ಅವರನ್ನು ಇಲ್ಲಿಗೆ ಕರೆತನ್ನಿ. ನಾನು ಒಂದು ಸಾರಿ ಪರೀಕ್ಷಿಸಿ, ಅವರ ಸಮಸ್ಯೆ ಹಲ್ಲಿನದೇ ಆಗಿದ್ದರೆ, ಉತ್ತಮ ಹಲ್ಲಿನ ವೈದ್ಯರಲ್ಲಿಗೆ ಕಳುಹಿಸುತ್ತೇನೆ" ಎಂದೆ.

ಮಾರನೆಯ ದಿನವೇ ಮೊಪಾರಾಮ್, ಗೆಳೆಯನನ್ನು ನನ್ನಲ್ಲಿಗೆ ಕರೆತಂದಿದ್ದರು. ನಲವತ್ತು ನಲವತ್ತೈದರ ಪ್ರಾಯದ ಅಶೋಕ್ ರಾಮ್ ಕೂಡ ಚಿಕ್ಕಪೇಟೆಯಲ್ಲಿ, ಮೊಪಾರಾಮ್‌ರ ಅಂಗಡಿ ಪಕ್ಕದಲ್ಲಿಯೇ ತಮ್ಮ ಅಂಗಡಿ ನಡೆಸಿಕೊಂಡಿದ್ದರು. ಈ ರಾಜಸ್ಥಾನಿಗಳೇ ಹೀಗೆ. ಚಿಕ್ಕ ವಯಸ್ಸಿನಲ್ಲಿಯೇ ಬೆಂಗಳೂರು ಹಾಗೆ ಇತರ ದೊಡ್ಡ ನಗರಗಳಿಗೆ ತಮ್ಮ ಸ್ನೇಹಿತರ, ಸಂಬಂಧಿಗಳ ಮಳಿಗೆಗಳಿಗೆ ಕೆಲಸಕ್ಕೆ ಎಂದು ಬರುತ್ತಾರೆ. ಸ್ವಲ್ಪ ವರ್ಷಗಳಲ್ಲಿ ವ್ಯವಹಾರದ ಒಳ ಹೊರಗುಗಳನ್ನು ಚೆನ್ನಾಗಿ ಅರಿತು, ತಮ್ಮದೇ ಆದ ಸ್ವಂತ ಉದ್ಯೋಗ ಪ್ರಾರಂಭಿಸುತ್ತಾರೆ. ಒಟ್ಟಿನಲ್ಲಿ ವ್ಯಾಪಾರಕ್ಕೆ ಅವರದ್ದು ಎತ್ತಿದ ಕೈ. ಹಾಗೂ ಅಶೋಕ್ ರಾಮ್ ಕೂಡ ಇದಕ್ಕೆ ಹೊರತಾಗಿರಲಿಲ್ಲ.

ಅಶೋಕ್ ರಾಮ್‌ನ ವಂದನೆಗೆ, ಪ್ರತಿ ವಂದನೆ ಸಲ್ಲಿಸಿ, "ಏನು ತೊಂದರೆ?" ಎಂದು ವಿಚಾರಿಸಲಾರಂಬಿಸಿದೆ. ರೋಗ ಪತ್ತೆ ಹಚ್ಚುವಲ್ಲಿ, ಅಂದರೆ ರೋಗ ಲಕ್ಷಣದ ಬಗ್ಗೆ (ಅದು ಪ್ರಾರಂಭವಾದ ರೀತಿ, ಯಾವ ಭಾಗದಲ್ಲಿ ನೋವು ಬರುತ್ತದೆ, ಹಾಗೆ ಯಾವ ಸಮಯದಲ್ಲಿ ನೋವು ಬರುತ್ತದೆ? ಯಾವ ಸಂದರ್ಭದಲ್ಲಿ ಹೆಚ್ಚೆನಿಸುತ್ತದೆ ಹಾಗೂ ಕಡಿಮೆಯಾಗುತ್ತದೆ) ಮೊದಲಾದ ವಿಚಾರಗಳ ಬಗ್ಗೆ ಸರಿಯಾದ ವಿವರಣೆ ದೊರೆತರೆ ರೋಗ ನಿರ್ಣಯಕ್ಕೆ ಸುಗಮವಾಗುತ್ತದೆ. ಕೆಲವೊಮ್ಮೆ ಈ ಎಲ್ಲಾ ಪ್ರಶ್ನೆಗಳಿಗೆ ಕಲೆ ಹಾಕಿದ ಉತ್ತರಗಳ ತಾಳೆ ಮಾಡಿ ರೋಗ ನಿರ್ಣಯಿಸಲೂಬಹುದು. (ಅಶೋಕ್‌ರಾಮರ ಹಿಂದಿ ಭಾಷೆಯ ಉತ್ತರವನ್ನು ಕನ್ನಡಕ್ಕೆ ತರ್ಜುಮೆ ಮಾಡಿ ಬರೆಯುತ್ತೇನೆ.)

ಅವರನ್ನು ನೋವು ಎಷ್ಟು ಸಮಯದಿಂದ ಹಾಗೂ ಯಾವ ಹಲ್ಲಿನಲ್ಲಿ? ಎಂದು ವಿಚಾರಿಸಿದೆ. ಅದಕ್ಕೆ ಅವರು,

"ಡಾಕ್ಟರ್ ಸಾಬ್, ಈವಾಗ ನೋವೇನು ಇಲ್ಲ ಮುಖಕ್ಕೆ ನೀರು ಚಿಮುಕಿಸಿದಾಗ ನೋವು ಕಾಣಿಸುತ್ತದೆ, ಊಟ ಮಾಡುವಾಗ ನೋವು ಬರುತ್ತದೆ. ಕೆಲವು ಬಾರಿ ನೋವು ಜಾಸ್ತಿಯಾಗಿ ಕೆಳತುಟಿಗೂ ಬರುತ್ತದೆ. ಬಹಳ ಜೋರಾಗಿ ಥಳಕಿನಂತೆ ನೋವು ಬರುತ್ತದೆ ಹಾಗೂ ಒಂದು ಹತ್ತರಿಂದ ಹದಿನೈದು ನಿಮಿಷಗಳ ಕಾಲ, ಒಂದೊಮ್ಮೆ ಅರ್ಧ ಗಂಟೆ, ಕೆಲವೊಮ್ಮೆ ಒಂದು ಗಂಟೆಗಳ ಕಾಲ, ನೋವಿರುತ್ತದೆ. ಮಾತ್ರೆ ತೆಗೆದುಕೊಂಡರೂ ತಡೆಯಲಾಗದ ನೋವು ಕಡಿಮೆಯಾಗುವುದಿಲ್ಲ" ಎಂದರಲ್ಲದೆ "ಈ ನೋವು ಆರೇಳು ತಿಂಗಳುಗಳಿಂದ ಇದೆ. ಸುಮಾರು ನಾಲ್ಕೈದು ಹಲ್ಲಿನ ವೈದ್ಯರಿಂದ ಹಾಗೂ ಹಲ್ಲಿನ ಆಸ್ಪತ್ರೆಯಿಂದಲೂ ಚಿಕಿತ್ಸೆ ಪಡೆದೆನಾದರೂ ಯಾವ ಪ್ರಯೋಜನವಾಗಲಿಲ್ಲ" ಎಂದರು.

ಬಾಯಿ ತೆರೆಸಿ ಹಲ್ಲುಗಳನ್ನು ಪರೀಕ್ಷಿಸಿದೆ. ಬೀಡಾ ಜಗಿಯುವ ಅಭ್ಯಾಸದಿಂದ ಎಲ್ಲಾ ಹಲ್ಲುಗಳು, ಹಳದಿ ಮಿಶ್ರಿತ ಕೆಂಪು ಬಣ್ಣಗಳಿಂದ ಕೂಡಿದ್ದರೂ ಎಲ್ಲೂ ಹುಳುಕು ಹಲ್ಲು ಕಾಣಿಸಲಿಲ್ಲ. ಕೆಳಗಿನ ದವಡೆಯ, ಮುಂಭಾಗದ ನಾಲ್ಕು ಹಲ್ಲುಗಳಿರುವ ವಸಡಿನಲ್ಲಿ ನೋವು ಬರುವುದಾಗಿ ತಿಳಿಸಿದರು. ಆದರೆ ವಸಡಿನಲ್ಲಿ ಯಾವ ತರಹದ ಸಮಸ್ಯೆಯೂ ಕಂಡು ಬರಲಿಲ್ಲ. ಇದು ಹಲ್ಲಿನ ಸಮಸ್ಯೆ ಅಲ್ಲವೆನ್ನುವುದು ನನಗೆ ದೃಢವಾಯಿತು. ಹಾಗೆ ಅವರು ತಿಳಿಸಿದ ಲಕ್ಷಣಗಳು ನನ್ನ ಸಂಶಯಕ್ಕೆ ಪುಷ್ಟಿ ನೀಡಿದ್ದವು. ಇವೆಲ್ಲ ಲಕ್ಷಣಗಳು ನಾನು ಊಹಿಸಿದ ರೋಗದ ಲಕ್ಷಣಗಳೇ ಆಗಿದ್ದವು. ಅದೇ, 'ಟ್ರೈಜೆಮಿನಲ್ ನ್ಯೂರಾಲ್ಜಿಯ' ಎನ್ನುವ ನರಸಂಬಂಧಿ ಕಾಯಿಲೆ.

ಮೆದುಳಿನಿಂದ ನೇರವಾಗಿ ಮುಖಕ್ಕೆ ಬರುವ ಐದನೇ ಕ್ರೇನಿಯಲ್ ನರ ಟ್ರೈಜೆಮಿನಿ. ಟ್ರೈಜೆಮಿನಿ ಮೂರು ಶಾಖೆಗಳಿರುವ, ಒಪ್ತಾಲ್ಮಿಕ್, ಮ್ಯಾಕ್ಸಿಲರಿ ಮತ್ತು ಮೆಂಡಿಬ್ಯುಲಾರ್ ಮುಖವನ್ನು ಪಸರಿಸುವ ಒಂದು ಮುಖ್ಯವಾದ ನರ. ಈ ನರವ್ಯೂಹ ಮೆದುಳಿನಿಂದ ಪ್ರಾರಂಭವಾಗುವ ಭಾಗದಲ್ಲಿ ಯಾವುದಾದರೂ

ಅಂಗಾಂಶಗಳಿಂದ ಒತ್ತಲ್ಪಟ್ಟಾಗ, ಮುಖ್ಯವಾಗಿ ರಕ್ತನಾಳ ಹಾಗೂ ಅದರ ಕವಲುಗಳು ಬಂದು ಸೇರುವ ಮುಖದ ಭಾಗದಲ್ಲಿ ನೋವು ಪ್ರಾರಂಭವಾಗುತ್ತದೆ. ಅಶೋಕ ರಾಮರ ಸಮಸ್ಯೆ, ಅವರು ಹೇಳುವ ಲಕ್ಷಣಗಳನ್ನು ಹೋಲಿಸಿದರೆ ಇದೇ ರೀತಿಯಾಗಿ ಕಾಣಿಸಿತು. ಹಾಗೆ ರೋಗದ ಬಗ್ಗೆ ನನ್ನ ಅನಿಸಿಕೆಯನ್ನು ಅವರಿಗೆ ತಿಳಿಸಿ, ತಲೆಯ ಸ್ಕ್ಯಾನ್ ಇಮೇಜಿಂಗ್ ಮಾಡಿಸಿಕೊಂಡು ಬರುವಂತೆ ಸಲಹೆ ನೀಡಿದೆ. ಟ್ರೈಜೆಮಿನಲ್ ನ್ಯೂರಾಲ್ಜಿಯವನ್ನು ಶಮನ ಮಾಡುವ ಮಾತ್ರೆಗಳನ್ನು ಬರೆದು ಕೊಟ್ಟೆ. ಕೂಡಲೇ ಆತ ಸ್ಕ್ಯಾನಿಂಗ್ ಮಾಡಿಸದಿದ್ದರೆ ಮಾತ್ರೆಯ ಪರಿಣಾಮ ನೋಡೋಣ ಎಂದುಕೊಂಡೆ. ಆದರೆ ಅಶೋಕರಾಮ್ ಎರಡೇ ದಿನಗಳಲ್ಲಿ ಸಿಟಿ ಸ್ಕ್ಯಾನ್ ರಿಪೋರ್ಟ್‌ನೊಂದಿಗೆ ನನ್ನನ್ನು ಭೇಟಿಯಾಗಲು ಬಂದಿದ್ದ. ಹೌದು, ಅವರ ಕಾಯಿಲೆ ನಾನು ಸಂದೇಹಿಸಿದಂತೆ ಬಲ ಭಾಗದ ಟ್ರೈಜೆಮಿನಲ್ ನ್ಯೂರಾಲ್ಜಿಯ ಆಗಿತ್ತು. ಸ್ಕ್ಯಾನಿಂಗ್ ರಿಪೋರ್ಟ್ ಪ್ರಕಾರ ಬಲಭಾಗದ ಮೆದುಳಿನಲ್ಲಿ ಐದನೆಯ ಕ್ರೇನಿಯಲ್ ನರವನ್ನು ಒಂದು ರಕ್ತನಾಳ ಒತ್ತುತ್ತಿತ್ತು. ಇದರಿಂದಾಗಿ ಮುಖಕ್ಕೆ ನೀರು ಚಿಮುಕಿಸಿದಾಗ, ಊಟದ ಸಮಯದಲ್ಲಿ ಜಗಿಯುವಾಗ, ನರ ಉದ್ರೇಕಗೊಂಡು ನೋವು ಕಾಣಿಸಿಕೊಳ್ಳುತ್ತಿತ್ತು.

"ಡಾಕ್ಟರ್ ನೀವು ಕೊಟ್ಟ ಮಾತ್ರೆ ಬಹಳ ಚೆನ್ನಾಗಿದೆ. ಅದನ್ನು ತೆಗೆದುಕೊಳ್ಳಲು ಪ್ರಾರಂಭಿಸಿದ ಮೇಲೆ ನನಗೆ ನೋವೇ ಬರಲಿಲ್ಲ. ನೀವು ನಿಜವಾಗಿಯೂ ನನ್ನ ಪಾಲಿನ ದೇವರು" ಎಂದು ಕೊಂಡಾಡಿದ. ಅಂದರೆ ಅವರು ಆರೆಂಟು ತಿಂಗಳುಗಳಿಂದ ಅದೆಷ್ಟು ವೇದನೆಯನ್ನು ಅನುಭವಿಸಿದ್ದರು ಎಂಬ ಅರಿವಾಗುತ್ತದೆ.

"ಹಾಗೆ ಲ್ಯಾಬೋರೇಟರಿಯಲ್ಲಿ ರೆಡಿಯಾಲಜಿಸ್ಟ್ ಕೂಡ ನಿಮ್ಮನ್ನು ಬಹಳ ತಾರಿಫು ಮಾಡಿದರು. ಸ್ಕ್ಯಾನಿಂಗಿಗೂ ಮೊದಲೇ ನೀವು ರೋಗದ ಬಗ್ಗೆ ನಿಖರವಾಗಿ ಸಂಶಯ ಪಟ್ಟಿರಲ್ಲ ಅದಕ್ಕೆ" ಎಂದರು.

ಸರಿ, ಒಂದು ಮೂರು ತಿಂಗಳು ಔಷಧೋಪಚಾರದ ನಂತರ ಬನ್ನಿ. ಬಹುಶಃ ಅಪರೇಷನ್ ಮಾಡಿದರೆ ಕಾಯಿಲೆ ಸಂಪೂರ್ಣ ವಾಸಿಯಾಗಬಹುದು ಎಂದೆ.

ಈ ಆಪರೇಷನ್‌ನಲ್ಲಿ ತಲೆಯ ಸರ್ಜರಿ ಮಾಡಿ ನರ ಮತ್ತು ರಕ್ತನಾಳದ ಮಧ್ಯೆ ಅಂತರವನ್ನು ಕಲ್ಪಿಸಿ, ನರದ ಮೇಲಿನ ಒತ್ತಡವನ್ನು ತಡೆಯುವಂತೆ ಮಾಡುತ್ತಾರೆ ಆದರೆ ಅಶೋಕರಾಮ್, ಬ್ರೈನ್ ಸರ್ಜರಿಗೆ ರೆಡಿ ಇದ್ದಂತೆ ಕಾಣಲಿಲ್ಲ. ಒಂದು ತಿಂಗಳ ನಂತರ ನನ್ನಲ್ಲಿಗೆ ಬಂದು, "ಈವಾಗ ಸಂಪೂರ್ಣವಾಗಿ ಗುಣಮುಖನಾಗಿರುವುದಾಗಿ ತಿಳಿಸಿದರು. ಹಾಗೆ ನಂತರದಲ್ಲಿ ಮೂರು ತಿಂಗಳು, ಆರು ತಿಂಗಳಿಗೊಮ್ಮೆ ನನ್ನನ್ನು ಭೇಟಿಯಾಗಿ ಸಲಹೆಯನ್ನು ಪಡೆಯುತ್ತಿದ್ದರು. ಒಟ್ಟಿನಲ್ಲಿ ಅಶೋಕ ರಾಮರ ಹಲ್ಲಿನ ನೋವು, ಹಲ್ಲಿನ ಸಮಸ್ಯೆ

ಆಗಿರಲಿಲ್ಲ. ಅದು ಸಂಕೀರ್ಣವಾದ ನರರೋಗ. ಬಹುಶಃ ಅವರ ನೋವಿನ ಬಗ್ಗೆ ವಿವರವಾಗಿ ಕೇಳಿ ಹಾಗೆ ತಪಾಸಣೆ ಮಾಡುವ ವೈದ್ಯರಿಗೂ ಈ ನರರೋಗದ ಬಗ್ಗೆ ತಿಳುವಳಿಕೆ ಇದ್ದರೆ ರೋಗ ನಿರ್ಣಯಿಸುವುದು ಕಷ್ಟ ಸಾಧ್ಯವೇನಲ್ಲ. ಅಂದರೆ ರೋಗಿ ಕಾಯಿಲೆಯ ಬಗ್ಗೆ ಅದರ ಲಕ್ಷಣಗಳ ಬಗ್ಗೆ ವಿವರಿಸುವಾಗ ವೈದ್ಯರು ಎಲ್ಲಾ ದೃಷ್ಟಿಕೋನಗಳಿಂದ ಯೋಚಿಸಿ ಕಾರ್ಯಪ್ರವೃತ್ತರಾಗಬೇಕಷ್ಟೇ.

# ಜಿಪ್ಪೆಂಬ ನರಕದ್ವಾರ

ವೃತ್ತಿಯಲ್ಲಿ ಡ್ರೈವರ್ ಆಗಿ ಒಂದು ಕಂಪನಿಯ ಇಂಟರ್ ಸ್ಟೇಟ್ ಲಾರಿ ಓಡಿಸುತ್ತಿದ್ದ ಪಳನಿ ನನ್ನ ಕಾಯಂ ರೋಗಿಗಳಲ್ಲಿ ಒಬ್ಬ. ಬೆಂಗಳೂರು, ಚೆನ್ನೈ, ಆಂಧ್ರ ಹೀಗೆ ದಿನಕ್ಕೊಂದು ಊರುಗಳಿಗೆ ಪಳನಿಯ ಪ್ರಯಾಣ ಇರುತ್ತಿತ್ತು. ಹಗಲಿನಲ್ಲಿ ಲಾರಿಗೆ ಲೋಡ್ ಮಾಡುವುದು ಅಥವಾ ಅನ್ಲೋಡ್ ಮಾಡುವುದು ಇರುವುದರಿಂದ, ಆತನ ಪ್ರಯಾಣವೆಲ್ಲ ಹೆಚ್ಚಾಗಿ ರಾತ್ರಿಯೆ ನಡೆಯುತ್ತಿತ್ತು. ಇದರಿಂದ ಸಹಜವಾಗಿ ಊಟ ನಿದ್ರೆಗಳ ವ್ಯತ್ಯಾಸವಾಗಿ ಗ್ಯಾಸ್, ಅಸಿಡಿಟಿಗಳು ಉಂಟಾಗುತ್ತಿತ್ತು. ಆ ಚಿಕಿತ್ಸೆಗಾಗಿ ನನ್ನಲ್ಲಿ ಬರುತ್ತಿದ್ದ.

ಒಂದು ಬೆಳಿಗ್ಗೆ ನಾನು ಕ್ಲಿನಿಕ್ ಪ್ರವೇಶಿಸಿದಾಗ ನಾಲ್ಕೈದು ಜನ ರೋಗಿಗಳಲ್ಲಿ ಪಳನಿ ಹಾಗೂ ಆತನ ಹೆಂಡತಿ ಸೇಲ್ವಿ ಕೂಡ ನಿರೀಕ್ಷಣೆಯಲ್ಲಿದ್ದರು. ಪಳನಿಯ ಮುಖಭಾವದಲ್ಲಿ ಅತಿಯಾದ ನೋವಿನ ಅನುಭವ ಕಾಣುತ್ತಿತ್ತು. ನನ್ನನ್ನು ನೋಡುತ್ತಲೇ ಸೆಲ್ವಿ "ಇವರದು ಸ್ವಲ್ಪ ಅರ್ಜೆಂಟ್ ಪ್ರಾಬ್ಲಮ್, ನಮ್ಮನ್ನೇ ಮೊದಲು ನೋಡಬಹುದಾ" ಎಂದು ವಿನಯವಾಗಿ ವಿನಂತಿಸಿಕೊಂಡಳು. ಸರಿಯೆಂದು ಅವರನ್ನೇ ಮೊದಲು ಒಳ ಕರೆದೆ. ನಿಜವಾಗಿಯೂ ತೀವ್ರವಾದ ತೊಂದರೆಯಲ್ಲಿದ್ದ ಪಳನಿ.

ಹಿಂದಿನ ರಾತ್ರಿ ಪಳನಿ ಚೆನ್ನೈಯಿಂದ ಬೆಂಗಳೂರಿಗೆ ಬರಬೇಕಿತ್ತು. ರಾತ್ರಿ ಸುಮಾರು 12 ಗಂಟೆಗೆ ಮೂತ್ರ ವಿಸರ್ಜನೆಗಾಗಿ ಲಾರಿಯಿಂದ ಇಳಿದ. ಮೂತ್ರ ವಿಸರ್ಜನೆಯ ನಂತರ, ಪ್ಯಾಂಟಿನ ಜಿಪ್ ಎಳೆದಾಗ ಅದು ಜನನಾಂಗದ ಮೇಲ್ಭಾಗಕ್ಕೆ ತಾಗಿ ಚರ್ಮದ ಸ್ವಲ್ಪ ಭಾಗ ಜಿಪ್ಪಿಗೆ ಸಿಕ್ಕಿಕೊಂಡಿತು. ಅಲ್ಪಸ್ವಲ್ಪ ಪ್ರಯತ್ನಿಸಿದರು ಬಿಡಿಸಿಕೊಳ್ಳುವುದಕ್ಕೆ ಆಗದೆ, ಹಾಗೆ ಗಾಡಿಯನ್ನು ಓಡಿಸಿಕೊಂಡು ಪಳನಿ ಬೆಂಗಳೂರಿಗೆ ಬಂದ. ಇಷ್ಟೆಲ್ಲವನ್ನು ತುಂಬಾ ನೋವಿನಲ್ಲಿ ಹೇಳುತ್ತಿದ್ದ ಪಳನಿಯಲ್ಲಿ ಸಹಜವಾಗಿ ಅಲ್ಲಲ್ಲಿ ಮುಜುಗರಗಳು ಇಣುಕುತ್ತಿತ್ತು.

ನಾನು ಸಹಜವಾಗಿ "ಅಂಡರ್ವೇರ್ ಇರಲಿಲ್ಲವೇ?" ಎಂದು ಕೇಳಿದೆ. ಆತನು "ಚೆನ್ನೈನ ಸೆಕೆಯನ್ನು ತಡೆಯಲಾರದೆ ಪ್ಯಾಂಟ್ ಒಂದನ್ನೇ ಹಾಕಿಕೊಂಡಿದ್ದೆ" ಎನ್ನುವಾಗ, ನನಗೆ ನಗು ಬಂದರು ತೋರಿಸಿಕೊಳ್ಳಲಿಲ್ಲ.

ಪಳನಿಯನ್ನು ಮಲಗಿಸಿ ಪರೀಕ್ಷಿಸಿದೆ. ಜನನಾಂಗದ ಹೊರ ಭಾಗದ ಮಧ್ಯದ ಚರ್ಮದಲ್ಲಿ ಒಂದು ಸೆಂಟಿಮೀಟರ್‌ನಷ್ಟು ಭಾಗ ಜಿಪ್ಪನಲ್ಲಿ ಸಿಲುಕಿಕೊಂಡಿತ್ತು. ಆತನ ಬಿಡಿಸಿಕೊಳ್ಳುವ ವಿಫಲ ಪ್ರಯತ್ನದಿಂದಾಗಿ ಪರಿಸ್ಥಿತಿ ಬಹಳ ಜಟಿಲವಾಗಿತ್ತು.

ಈ ಸ್ಥಿತಿಯಲ್ಲಿ ಚೆನ್ನೈನಿಂದ ಬೆಂಗಳೂರಿನವರೆಗೆ ಆತ ಗಾಡಿ ಓಡಿಸಿದ್ದೇ ಆಶ್ಚರ್ಯ! ಸಹಜವಾದ ನೋವಿನೊಂದಿಗೆ, ಲಾರಿಯ ಕುಲುಕಾಟದಲ್ಲಿ ಇನ್ನೆಷ್ಟು ಹಿಂಸೆಯನ್ನು ಅನುಭವಿಸಿದನೋ?! ಅದನ್ನು ಹೇಗೆ ತಡೆದುಕೊಂಡನೋ ದೇವರೇಬಲ್ಲ!

ಕತ್ತರಿಯಿಂದ ಪ್ಯಾಂಟಿನ ಜಿಪ್ಪನ್ನು ಕತ್ತರಿಸಿದೆ. ಅರಿವಳಿಕೆಯನ್ನು ನೀಡಿ, ಜಿಪ್ಪಿಗೆ ಸಿಲುಕಿಕೊಂಡಿರುವ ಸುಮಾರು ಒಂದು ಸೆಂಟಿಮೀಟರ್ ಉದ್ದ, ಅರ್ಧ ಸೆಂಟಿಮೀಟರ್ ಅಗಲದ ಚರ್ಮವನ್ನು ಕತ್ತರಿಸಿ, ಜಿಪ್ಪನ್ನು ಬೇರ್ಪಡಿಸಿದೆ. ಆದ ಗಾಯಕ್ಕೆ ನಿಧಾನವಾಗಿ ಹೊಲಿಗೆ ಹಾಕಿ ಟಿ.ಟಿ. ವ್ಯಾಕ್ಸಿನ್ ಚುಚ್ಚಿ, ಆಂಟಿಬಯೋಟಿಕ್ಸ್ ಮಾತ್ರೆಗಳನ್ನು ಬರೆದು ಕೊಟ್ಟೆ.

ಪಳನಿ ಸೆಲ್ವಿ ತಂದ ಲುಂಗಿಯನ್ನು ಸುತ್ತಿಕೊಂಡನು. ನಾನು, "ಲಾರಿಯ ಕ್ಯಾಬಿನ್‌ನಲ್ಲಿ ಒಂದು ಫ್ಯಾನನ್ನು ಹಾಕಿಕೋ, ಈ ರೀತಿ ಅಂಡರ್‌ವೇರ್ ಧರಿಸದೆ ಪ್ಯಾಂಟನ್ನು ಹಾಕಬೇಡ" ಎಂಬ ಸಲಹೆಯನ್ನು ನೀಡಿದೆ. ಗಂಡ ಹೆಂಡತಿ ಇಬ್ಬರು ಅಳುತ್ತಲೆ ಬಂದು ಕಾಲಿಗೆ ಬಿದ್ದರು. ಇದು ಒಂದು ತರ ಹೇಳಲಾಗದ ನೋವು, ತಾಳಲಾಗದ ಅನುಭವ. ಇದರ ಪರಿಹಾರಕ್ಕಾಗಿ ಇನ್ನೊಂದು ಆಸ್ಪತ್ರೆಗೆ ಕಳುಹಿಸದೆ, ನನ್ನ ಕ್ಲಿನಿಕ್ಕಿನಲ್ಲಿಯೇ ಈ ಸಮಸ್ಯೆಯನ್ನು ಪರಿಹರಿಸಿದ್ದರಿಂದ ಪಳನಿ ದಂಪತಿಗಳು ತುಂಬಾ ಭಾವುಕರಾಗಿದ್ದರು.

ಒಂದು ವಾರದ ನಂತರ ಹೊಲಿಗೆಯನ್ನು ಬಿಡಿಸಲು ಪಳನಿ ಬಂದ. ಗಾಯವೆಲ್ಲ ಚೆನ್ನಾಗಿ ವಾಸಿಯಾಗಿ, ಹಾಗೆ ಪಳನಿಯ ಮುಖದಲ್ಲೂ ನಗು ತುಂಬಿತ್ತು. ಸೆಲ್ವಿ ಕುಟುಂಬದ ಜವಾಬ್ದಾರಿಯಂತೆ "ಸಾರ್! ನೀವಾದರೂ ಇವರಿಗೆ ಬುದ್ಧಿ ಹೇಳಿ, ಈ ಇಂಟರ್‌ಸ್ಟೇಟ್ ಗಾಡಿಯೆ ಬೇಡ. ಮನೆಯ ಹತ್ತಿರವೇ ಒಂದು ಅಂಗಡಿ ಹಾಕಿಕೊಂಡು, ಇಲ್ಲಿ ಯಾವುದಾದರೂ ಕಂಪನಿಯ ಗಾಡಿ ಓಡಿಸಿಕೊಂಡು ಇರಬಹುದು" ಎಂದಳು.

ಸೆಲ್ವಿ ಹೇಳುವುದರಲ್ಲಿ ಸರಿಯಾದ ವಿಚಾರವಿದ್ದಾದರೂ ಸ್ವಲ್ಪ ಹೆಚ್ಚಿನ ಆದಾಯ ಇರುವುದರಿಂದ ಪಳನಿ ಈ ರೀತಿ ಗಾಡಿ ಓಡಿಸಿಕೊಂಡಿರಬಹುದು ಎಂದು ಅನಿಸಿತು.

ಇದೇ ರೀತಿ ಇನ್ನೊಮ್ಮೆ ಎರಡು ಮೂರು ವರ್ಷದ ಚಿಕ್ಕ ಹುಡುಗನನ್ನು ಕರೆದುಕೊಂಡು ಬಂದಿದ್ದರು. ಆತ ಚಿಕ್ಕ ಹುಡುಗನಾದ್ದರಿಂದ ಈ ಪ್ರಸಂಗವನ್ನು ನಿಭಾಯಿಸಲು, ಕೈಕಾಲುಗಳನ್ನು ಹಿಡಿದುಕೊಳ್ಳಲು ನಾಲ್ಕು ಜನರೇ ಬೇಕಾಯಿತು.

ಜಿಪ್ ಇರುವ ಬಟ್ಟೆಯನ್ನು ಧರಿಸುವಾಗ ನೇರವಾಗಿ ಚರ್ಮಕ್ಕೆ ತಾಗದಂತೆ ವ್ಯವಸ್ಥೆಯನ್ನು ಮಾಡಿಕೊಂಡೆ ಇರಬೇಕು. ಇಲ್ಲದಿದ್ದರೆ ನೋವು ನಗು ಎರಡನ್ನು ಒಟ್ಟಿಗೆ ಅನುಭವಿಸಬೇಕಾಗುತ್ತದೆ.

# ಮನಸು ಕಾರಣ

ರಾಜಸ್ಥಾನ ಮೂಲದ ಬಟ್ಟೆ ವ್ಯಾಪಾರಿಗಳೊಬ್ಬರ ಮನೆ ನನ್ನ ಕ್ಲಿನಿಕ್ಕಿನ ಹಿಂದೆ ಇತ್ತು. ನಾಲ್ಕು ಜನ ಅಣ್ಣತಮ್ಮಂದಿರು ಇಲ್ಲಿಯ ವಾಸವಿದ್ದು, ವ್ಯಾಪಾರವನ್ನು ಮುಂದುವರಿಸಿದ್ದರು. ಆ ಮನೆಯಲ್ಲಿ ರಂಜಿತನೆಂಬ ಹತ್ತು ವರ್ಷದ ಹುಡುಗನಿದ್ದ. ಮನೆಯಲ್ಲಿ ಯಾರಿಗಾದರೂ ಅನಾರೋಗ್ಯ ಕಾಡಿದರೆ ರಂಜಿತನ ಕೈಯಲ್ಲಿ ಐವತ್ತು ರೂಪಾಯಿಗಳನ್ನು ಕೊಟ್ಟು, ಔಷಧಿಯನ್ನು ತರುವುದಕ್ಕಾಗಿ ನನ್ನ ಕ್ಲಿನಿಕ್ಕಿಗೆ ಕಳುಹಿಸುತ್ತಿದ್ದರು. ಆಗ ನನ್ನ ಚಿಕಿತ್ಸಾ ಶುಲ್ಕ ಕೇವಲ ಹತ್ತು ರೂಪಾಯಿ ಇದ್ದ ಕಾಲ. ಹಾಗಾಗಿ ನಾನು ಕೊಡುವ ಚಿಲ್ಲರೆಯನ್ನು ಎಲ್ಲಾದರೂ ಈ ಮಗು ಬೀಳಿಸಿಕೊಂಡು ಹೋದರೆ ಎಂಬ ಚಿಂತೆ ನನಗಾದರೆ, ಮಗುವಿಗೆ ಜವಾಬ್ದಾರಿ ಬರಲಿ ಎಂಬ ಸದುದ್ದೇಶ ತಂದೆ ತಾಯಿಗಳದಾಗಿತ್ತು.

ಹೀಗೆ ಪೂರ್ವ ಪರಿಚಿತನಾದ ರಂಜಿತನನ್ನು ಆತನ ತಂದೆ ಒಂದು ದಿನ ಎತ್ತಿಕೊಂಡು ಗಾಬರಿಯಿಂದ ನನ್ನ ಕ್ಲಿನಿಕ್ಕಿಗೆ ಬಂದರು. ಸೈಕಲ್ ಓಡಿಸುವಾಗ ಬಿದ್ದು ರಂಜಿತನ ತಲೆಗೆ, ಸುಮಾರು ಆರು ಇಂಚು ಉದ್ದದ ಅರ್ಧಚಂದ್ರಾಕೃತಿಯ ಗಾಯವಾಗಿತ್ತು. ಅಷ್ಟು ಉದ್ದಕ್ಕೆ ತಲೆ ಬುರುಡೆಯ ಮೇಲಿನ ಚರ್ಮ ಎದ್ದಿತ್ತು. ಬಟ್ಟೆ ಬಿಗಿದು ರಕ್ತಸ್ರಾವವನ್ನು ನಿಲ್ಲಿಸಿದ್ದರು. ನಿಧಾನವಾಗಿ ಗಾಯವನ್ನು ಸ್ವಚ್ಛಗೊಳಿಸಿ ಸುಮಾರು ಹದಿನೈದರಿಂದ ಇಪ್ಪತ್ತು ಹೊಲಿಗೆಯನ್ನು ಹಾಕಿದ್ದಾಯಿತು. '24 ರಿಂದ 48 ಗಂಟೆಗಳ ಕಾಲ ಮನೆಯಲ್ಲಿಯೆ ರಂಜಿತನನ್ನು ಇರಿಸಿಕೊಂಡು, ಗಮನಿಸುತ್ತಲೇ ಇರಿ. ಮತ್ತೆ ರಕ್ತಸ್ರಾವವಾಗುವುದೇ ನೋಡಿ' ಎಂದು ತತ್ಕಾಲದ ಸಲಹೆಯನ್ನು ನೀಡಿದೆ. ಹಾಗೆ ಮುನ್ನೆಚ್ಚರಿಕೆಯಾಗಿ ಸಿಟಿ ಸ್ಕ್ಯಾನನ್ನು ಮಾಡಿಸಲು ಸಲಹೆಯನ್ನು ನೀಡಿದೆ. ತಲೆಗೆ ಬಿದ್ದ ಏಟಿನ ಪರಿಣಾಮ, ತಲೆಯ ಒಳಭಾಗದಲ್ಲಿ ಏನಾಗಿದೆ? ಎಂದು ತಿಳಿಯಬೇಕಿತ್ತು. ಬೇರಾವ ತೊಂದರೆಯೂ ಇಲ್ಲವೆಂಬ ರಿಪೋರ್ಟ್ ಬಂತು. ಹದಿನೈದು ದಿವಸಗಳಲ್ಲಿ ರಂಜಿತನ ತಲೆಯ ಗಾಯವು ವಾಸಿಯಾಗಿತ್ತು.

ಇದಾಗಿ ನಾಲ್ಕೈದು ವರ್ಷಗಳ ನಂತರ ರಂಜಿತನ ತಂದೆ ವಿಕ್ರಮರು ಮಗನನ್ನು ನನ್ನ ಕ್ಲಿನಿಕ್ಕಿಗೆ ಕರೆದುಕೊಂಡು ಬಂದರು. 'ಡಾಕ್ಟರ್! ಇವತ್ತು ರಂಜಿತನಿಗೆ ಮನೆಯಲ್ಲಿ ಫಿಟ್ಸ್(ಅಪಸ್ಮಾರ) ಕಾಣಿಸಿಕೊಂಡಿದ್ದು, ಒಂದೆರಡು ನಿಮಿಷ ಬಲಗೈ ಬಲಗಾಲನ್ನು ಅಲ್ಲಾಡಿಸುತ್ತಾ, ನಾಲಿಗೆಯನ್ನು ಕಚ್ಚಿಕೊಂಡಿದ್ದ. ಬಾಯಲ್ಲಿ ನೊರೆ ಬರುತ್ತಿತ್ತು. ಜೊತೆಗೆ ಸ್ವಲ್ಪ ರಕ್ತವು ಬಂತು. ನಮಗೆ ತಿಳಿದಂತೆ

ಕೂಡಲೇ ಕೈಗೆ ಕಬ್ಬಿಣವನ್ನು ಕೊಟ್ಟು, ಫಿಟ್ಸ್ ನಿಲ್ಲುವಂತೆ ಮಾಡಿದೆವು' ಎಂದು ವರದಿಯನ್ನು ನೀಡಿದರು.

'ಈ ಹಿಂದೆ ಸೈಕಲ್ಲಿನಿಂದ ಬಿದ್ದ ಪರಿಣಾಮ ಇದಾಗಿರಬಹುದು', ಎಂಬ ಸರಿಯಾದ ಊಹೆಯನ್ನು ವಿಕ್ರಮರು ಮಾಡಿದ್ದರು. ಕೆಲವೊಮ್ಮೆ ಈ ತರದ ತೀವ್ರವಾದ ಏಟು ತಲೆಗೆ ಬಿದ್ದಾಗ 'ಅಪಸ್ಮಾರ' ಬರುವ ಸಂಭವವಿರುತ್ತದೆ. ಏನಿದ್ದರೂ ಚಿಕಿತ್ಸೆ ತಕ್ಷಣವೇ ಪ್ರಾರಂಭಿಸಬೇಕಿತ್ತು. ಮಾತ್ರೆಯನ್ನು ಬರೆದು ಕೊಟ್ಟು, ಒಂದು ದಿನವೂ ತಪ್ಪದೇ ಮಾತ್ರೆಯನ್ನು ಸೇವಿಸಬೇಕೆಂಬ ಎಚ್ಚರಿಕೆಯನ್ನು ನೀಡಿದೆ. ನರರೋಗ ತಜ್ಞರಾದ ನನ್ನ ಸ್ನೇಹಿತನಲ್ಲಿ ಒಮ್ಮೆ ಭೇಟಿಕೊಟ್ಟು ಸಲಹೆಯನ್ನು ಪಡೆಯುವಂತೆ ಹೇಳಿದೆ. ಹಾಗೆ ಇನ್ನೊಮ್ಮೆ ಸಿ.ಟಿ. ಸ್ಕ್ಯಾನ್, ಇ.ಇ.ಜಿ ಪರೀಕ್ಷೆಯು ಆಯಿತು. ನನ್ನ ಸ್ನೇಹಿತನು ಬೇರಾವ ತೊಂದರೆಯೂ ಇಲ್ಲ, ಈಗ ಕೊಟ್ಟಿರುವ ಮಾತ್ರೆಯ ಡೋಸನ್ನು ಹೆಚ್ಚಿಸುವಂತೆ ಸಲಹೆಯನ್ನು ನೀಡಿದ. ಮುಂದೆ ರಂಜಿತನು ನಿಯತವಾಗಿ ತಪಾಸಣೆಗೆ ಬಂದು, ಕೊಟ್ಟ ಸಲಹೆಯನ್ನು ಚೆನ್ನಾಗಿಯೇ ಪಾಲಿಸಿದ. ಇದರಿಂದ ಅಪಸ್ಮಾರ ಕಾಯಿಲೆ ಬಹುಬೇಗ ಸ್ಥಿಮಿತಕ್ಕೆ ಬಂತು.

ಓದಿನಲ್ಲಿ ಚೆನ್ನಾಗಿ ಮುಂದುವರಿಯಲು ರಂಜಿತನಿಗೆ ಆಸಕ್ತಿಯಿರಲಿಲ್ಲ. ಆದುದರಿಂದ ಸಹಜವಾಗಿಯೇ ಆತ ತನ್ನ ಕುಲಕಸುಬಿಗೇ ಶರಣಾಗಿದ್ದ. ಹೀಗೆ ಬಟ್ಟೆ ವ್ಯಾಪಾರಕ್ಕಾಗಿ ಕಾಶಿ ಸೂರತ್ ಕೊಲ್ಕತ್ತಾ ಮುಂತಾದ ಕಡೆ ಪ್ರಯಾಣಿಸುತ್ತಿದ್ದ ಆದರೆ ಮಾತ್ರೆಗಳನ್ನು ನಿತ್ಯ ಸೇವಿಸುವ ಅಭ್ಯಾಸವನ್ನು ಬಿಡಲಿಲ್ಲ.

ರಂಜಿತ ಮದುವೆಯ ವಯಸ್ಸಿಗೆ ಬಂದಾಗ, ಆತನ ತಂದೆ ತಾಯಿಗಳು ನನ್ನಲ್ಲಿ ಬಂದು ಅವರ ಆತಂಕವನ್ನು ತೋಡಿಕೊಂಡರು. 'ರಂಜಿತನಿಗೆ ಅಪಸ್ಮಾರ ಕಾಯಿಲೆ ಇರುವುದರಿಂದ ಮದುವೆ ಮಾಡಬಹುದೆ?' ಎಂದು ಕೇಳಿದರು. 'ಈ ಕಾಯಿಲೆಯಿಂದ ಸಂತಾನೋತ್ಪತ್ತಿಗಾಗಲಿ, ಇನ್ನಾವುದೇ ತೊಂದರೆಯಾಗಲಿ ಇಲ್ಲ.' ಎಂದು ಅವರ ಸಂಶಯವನ್ನು ನಿವಾರಿಸಿದೆ. ತದನಂತರ ರಂಜಿತನಿಗೆ ಹಿಂದೂಪುರದ ಹುಡುಗಿಯೊಬ್ಬಳೊಂದಿಗೆ ವಿವಾಹ ನಿಶ್ಚಯವಾಗಿ, ಅಲ್ಲೇ ಮದುವೆಯೂ ನಡೆಯಿತು.

ಮುಂದೆ ಐದಾರು ತಿಂಗಳ ನಂತರ ಬಿ.ಪಿ. ಶುಗರ್ ಟೆಸ್ಟ್‌ಗಾಗಿ ರಂಜಿತನ ತಂದೆ ವಿಕ್ರಮರು ಕ್ಲಿನಿಕ್ಕಿಗೆ ಬಂದಾಗ, 'ರಂಜಿತ ಬಟ್ಟೆ ವ್ಯಾಪಾರದಲ್ಲಿ ಎಂಟರಿಂದ ಹತ್ತು ಲಕ್ಷದಷ್ಟು ನಷ್ಟ ಮಾಡಿಕೊಂಡಿರುವುದನ್ನು ತಿಳಿಸಿ, ಬಹುದೊಡ್ಡ ಪ್ರಮಾಣದ ನಷ್ಟದಿಂದ ರಂಜಿತನು ತುಂಬಾ ಬೇಸರದಲ್ಲಿದ್ದಾನೆ' ಎಂಬುದನ್ನೂ ಹೇಳಿದರು.

ಇದಾಗಿ ನಾಲ್ಕೈದು ದಿನಗಳಲ್ಲಿ ಒಂದು ದಿನ ರಂಜಿತನ ತಮ್ಮ ಕ್ಲಿನಿಕ್ಕಿಗೆ ಓಡಿಬಂದು, ಅವರ ಮನೆಗೆ ವಿಸಿಟ್ ಕೊಡುವಂತೆ ಕೇಳಿಕೊಂಡ. ರಂಜಿತ ವಿಚಿತ್ರವಾಗಿ ಕೈಕಾಲುಗಳನ್ನು ಆಡಿಸುತ್ತಾ, ಪಿಟ್ಸ್ ಬಂದಂತೆ ವರ್ತಿಸುತ್ತಿದ್ದನೆಂದು

ತಿಳಿಸಿದ. ನಾನು ಕ್ಲಿನಿಕ್‌ನಲ್ಲಿ ಕಾಯುತ್ತಿರುವ ರೋಗಿಗಳಿಗೆ ಹೇಳಿ, ಅವರ ಮನೆಗೆ ಧಾವಿಸಿದೆ. ರಂಜಿತನ ಹೆಂಡತಿ ರೋಶನಿ ಹಾಗೂ ತಾಯಿ ರಂಜಿತನ ಕೈಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಅಳುತ್ತಿದ್ದರು. ರಂಜಿತ ವಿಚಿತ್ರ ಸ್ವರದಲ್ಲಿ ಕೂಗುತ್ತಿದ್ದ. ಕೈಕಾಲುಗಳನ್ನು ಅಲ್ಲಾಡಿಸಲು ಪ್ರಯತ್ನಿಸುತ್ತಿದ್ದ. ಕಣ್ಣನ್ನು ಬಿಗಿಯಾಗಿ ಮುಚ್ಚಿಕೊಂಡಿದ್ದ. ರಂಜಿತನನ್ನು ನೋಡುತ್ತಿದ್ದಂತೆ, ಇದು ಫಿಟ್ಸ್ ಅಲ್ಲ, ಹಿಸ್ಟೀರಿಯಾದ ಲಕ್ಷಣ ಎಂಬುದು ಖಚಿತವಾಯಿತು. ಜೋರಾಗಿ ಒಂದೆರಡು ಬಾರಿ ರಂಜಿತಾ.. ರಂಜಿತಾ.. ಎಂದು ಕೂಗಿ ಕರೆದು, ಸುಮ್ಮನಿರುವಂತೆ ಹೇಳಿದೆ. ಮನಸ್ಸು ಶಾಂತ ಸ್ಥಿತಿಗೆ ಬರಲು (calmpox) ಇಂಜೆಕ್ಷನ್ ನೀಡಿ, ನಡೆದ ಸಮಸ್ಯೆ ಏನೆಂದು ಆತನ ತಾಯಿಯಲ್ಲಿ ವಿಚಾರಿಸಿದೆ.

ನಾಲ್ಕೈದು ದಿನಗಳಿಂದ ಪ್ರವಾಸದಲ್ಲಿದ್ದ ರಂಜಿತ, ಆ ದಿನವೇ ಮನೆಗೆ ಬಂದಿದ್ದ. ಪ್ರಯಾಣದ ನಡುವೆ ಮಾತ್ರೆ ಖಾಲಿಯಾಯಿತು. ಅಲ್ಲೆಲ್ಲಿಯೂ ಮಾತ್ರೆಯು ಸಿಗಲಿಲ್ಲ. ಅದರಿಂದ ರಂಜಿತ ಮಾತ್ರೆಯನ್ನು ತೆಗೆದುಕೊಳ್ಳದೆ ಮೂರು ದಿನಗಳು ಕಳೆದು ಹೋಗಿತ್ತು. ನಾನು ಹೋಗುವ ಹತ್ತು ನಿಮಿಷಗಳ ಮೊದಲು, ರಂಜಿತನಿಗೆ ಚಿಕಿತ್ಸೆ ಪ್ರಾರಂಭವಾಗಿ 12 ವರ್ಷಗಳ ನಂತರ ಅದೇ ಮೊದಲ ಬಾರಿಗೆ ಫಿಟ್ಸ್ ಬಂದಿತ್ತು. ಅದಾಗಿ ನಾಲ್ಕೈದು ನಿಮಿಷಗಳಲ್ಲಿ ಎಚ್ಚರವು ಬಂತು. ತದನಂತರ ಈ ರೀತಿಯ ವಿಕಾರವಾಗಿ ವರ್ತಿಸುತ್ತಿದ್ದ

ರಂಜಿತನಿಗೆ ಫಿಟ್ಸ್ ಮಾತ್ರೆ, ಜೊತೆಗೆ ಮನೋವಿಕೋಪ ಶಮನಕ್ಕೆ ಮಾತ್ರೆಗಳನ್ನು ಬರೆದುಕೊಟ್ಟು, ಆತನ ತಾಯಿ ಹಾಗೂ ಹೆಂಡತಿಗೆ ಪ್ರತ್ಯೇಕವಾಗಿ ಕ್ಲಿನಿಕ್ಕಿನಲ್ಲಿ ಭೇಟಿಯಾಗಲು ತಿಳಿಸಿದೆ.

ರಂಜಿತನ ತಾಯಿ ನನ್ನ ಹಿಂದೆಯೆ ಕ್ಲಿನಿಕ್ಕಿಗೆ ಬಂದರು. ಬಂದವರೆ ಪಿಸುದನಿಯಲ್ಲಿ 'ಡಾಕ್ಟರ್! ನಾವು ಮದುವೆಗೆ ಮೊದಲು ರಂಜಿತನಿಗೆ ಫಿಟ್ಸ್ ಇರುವ ವಿಚಾರವನ್ನು ಸೊಸೆಗಾಗಲಿ, ಅವರ ಮನೆಯವರಿಗಾಗಲಿ ತಿಳಿಸಿರಲಿಲ್ಲ. ತಿಳಿಸಿದರೆ ಮದುವೆಯನ್ನು ನಿರಾಕರಿಸಬಹುದೆಂದು ಯೋಚಿಸಿದೆವು. ಹಾಗೆ ಟ್ರೀಟ್ಮೆಂಟ್ ಪ್ರಾರಂಭವಾಗಿ ಹನ್ನೆರಡು ವರ್ಷಗಳು ಕಳೆದರೂ, ಈ ರೀತಿಯಾಗಿ ಫಿಟ್ಸ್ ಮರುಕಳಿಸಿರಲಿಲ್ಲ. ಈಗ ಗಂಡನನ್ನು ನೋಡಿ ರೋಶನಿ ತುಂಬಾ ಕಂಗಾಲಾಗಿದ್ದಾಳೆ. ನೀವೇ ಆಕೆಗೆ ಧೈರ್ಯವನ್ನು ಹೇಳಿ, ನಮ್ಮ ಪರಿಸ್ಥಿತಿಯನ್ನು ನಿಭಾಯಿಸಬೇಕು' ಎಂದು ಕೇಳಿಕೊಂಡಳು.

ಅವರಿಗೆ ಫಿಟ್ಸ್ ಮತ್ತು ಹಿಸ್ಟೀರಿಯಾದ ನಡುವಿನ ವ್ಯತ್ಯಾಸ ಗೊತ್ತಿರಲಿಲ್ಲ. ಒಂದು ದೈಹಿಕ ಕಾಯಿಲೆಯಾದರೆ ಇನ್ನೊಂದು ಮಾನಸಿಕ ಕಾಯಿಲೆಯಾಗಿತ್ತು. ವ್ಯಾಪಾರದಲ್ಲಾದ ನಷ್ಟ, ಕಾಯಿಲೆಯನ್ನು ಮುಚ್ಚಿಟ್ಟು ಮದುವೆಯಾದ ಸಂಗತಿಗಳೆಲ್ಲ ರಂಜಿತನ ಮನಸ್ಸಿನಲ್ಲಿ ವಿಕಾರವಾಗಿ ಈ ಸಂದರ್ಭದಲ್ಲಿ ಹಿಸ್ಟೀರಿಯಾ ರೂಪದಲ್ಲಿ ಹೊರಬಿದ್ದಿತ್ತು. ರಂಜಿತನ ತಾಯಿಗೂ, ಈ ವಿವರಣೆಯನ್ನು ನೀಡಿ ಕಳುಹಿಸಿದೆ.

ರಂಜಿತನ ತಾಯಿ ಮನೆಗೆ ಹೋದ ನಂತರ, ಸೊಸೆ ರೋಶನಿ ಕ್ಲಿನಿಕ್ಕಿಗೆ ಬಂದಳು. ಗಂಡನ ಈ ಕಾಯಿಲೆಯ ವಿಚಾರವೇ ಗೊತ್ತಿಲ್ಲದ ರೋಶನಿ ಹೇಗೆ ವರ್ತಿಸುತ್ತಾಳೋ ಎಂಬ ಗೊಂದಲವು ನನಗೆ ಇತ್ತು. ಅಷ್ಟೇ ಅಲ್ಲದೆ ನಾನು ಕೊಡುವ ವಿವರವನ್ನು ಒಪ್ಪಿಕೊಳ್ಳದಿದ್ದರೆ, ಸಂಸಾರದ ಗತಿ ಏನು ಎಂಬ ಆತಂಕವೂ ಉಂಟಾಗಿತ್ತು.

ರೋಶನಿ ನಾನು ತಿಳಿದಂತೆ ಇರಲಿಲ್ಲ. ಬಹಳ ಸಮಾಧಾನದ ಮಹಿಳೆಯಾಗಿದ್ದಳು! ಈ ಮೊದಲೇ ಅವರ ಹತ್ತಿರದ ಸಂಬಂಧಿಕರೊಬ್ಬರಿಗೆ ಫಿಟ್ಸ್ ಇರುವುದನ್ನು ನೋಡಿದ್ದಳು. ಹಾಗಾಗಿ ಆ ಕಾಯಿಲೆಯ ಬಗ್ಗೆ ಅಷ್ಟೋ ಇಷ್ಟೋ ತಿಳಿದಿತ್ತು. ನಾನು ಕಾಯಿಲೆಯ ವಿವರವನ್ನು ಹೇಳುತ್ತಿದ್ದಂತೆ ಎಲ್ಲವನ್ನು ಗ್ರಹಿಸಿದಳು. ಬಹುಬೇಗ ಆತ್ಮವಿಶ್ವಾಸವನ್ನು ಪಡೆದುಕೊಂಡಳು. ಆದ ಗಾಯವನ್ನು ಕೆರೆದು ಹುಣ್ಣನ್ನು ಮಾಡಿಕೊಳ್ಳುವುದಕ್ಕಿಂತ, ಮುಂದೇನು ಎಂದು ಯೋಚಿಸುವ ರೋಶನಿಯ ಸ್ವಭಾವವು ನನಗೆ ತುಂಬಾ ಇಷ್ಟವಾಯಿತು. ಈ ಮನಸ್ಥಿತಿ ಇದ್ದರೆ ಯಾವ ಸಂಸಾರದಲ್ಲೂ ಬಿರುಕು, ಭಿನ್ನಾಭಿಪ್ರಾಯ, ಜಗಳ, ತಂಟೆಗಳು ಇರುವುದಿಲ್ಲ ಎಂದು ಅನಿಸಿತು.

ಇನ್ನು ಒಂದೆರಡು ದಿವಸ ಕಳೆದ ಮೇಲೆ ರಂಜಿತನನ್ನು ಕರೆದು ಮಾತಾಡಿ, ಸಮಾಧಾನವನ್ನು ಹೇಳಿದೆ. ಆತನು ಹೆಂಡತಿಯ ಮುಂದೆ ಹೀಗಾಗಿದ್ದಕ್ಕಾಗಿ ಸ್ವಲ್ಪ ಕುಗ್ಗಿ ಹೋಗಿದ್ದ. ಮಾತ್ರೆಯು ತಪ್ಪಿತ್ತು ನಿದ್ರೆಯೂ ಆಗದೆ ಹೀಗಾಗಿತ್ತು. ಮುಂದೆ ಮಾತ್ರೆಯ ಬಗ್ಗೆ ಎಚ್ಚರವನ್ನು ಹೇಳಿ ಬದುಕಿನ ಬಗ್ಗೆ ಧೈರ್ಯವನ್ನು ತುಂಬಿ ಕಳುಹಿಸಿದೆ.

ಮುಂದೆ ರಂಜಿತ ವೈದ್ಯಕೀಯ ಸಲಹೆಯನ್ನು ಚಾಚೂ ತಪ್ಪದೆ ಮತ್ತೊಮ್ಮೆ ಕಾಯಿಲೆ ಮರುಕಳಿಸದಂತೆ ನೋಡಿಕೊಂಡ. ಬಟ್ಟೆ ವ್ಯಾಪಾರವನ್ನು ಬಿಟ್ಟು ಗ್ರಾನೆಟ್ ವ್ಯಾಪಾರಕ್ಕೆ ಇಳಿದು ಆದ ನಷ್ಟವನ್ನೆಲ್ಲ ತುಂಬಿಕೊಂಡ. ಹೀಗೆ ಬದುಕನ್ನು ಚೆನ್ನಾಗಿ ನಡೆಸುತ್ತಿದ್ದಾನೆ.

# ಪಾದವನ್ನು ಉರಿಸಿದ ಪಾದರಸ

ಸುಮಾರು 30 ವರ್ಷಗಳ ಹಿಂದಿನ ಒಂದು ಘಟನೆ. ಸುಂದರ ಮತ್ತು ವಿಮಲಾ ದಂಪತಿಗಳು, ಮಕ್ಕಳು, ತಂದೆ ಮತ್ತು ತಮ್ಮ ನಟೇಶನೊಂದಿಗೆ ನನ್ನ ಕ್ಲಿನಿಕ್ಕಿನ ಪಕ್ಕದಲ್ಲಿ ವಾಸವಿದ್ದರು. ಸುಂದರ ಬಿ.ಇ. ಮುಗಿಸಿ, ಬಿ.ಇ.ಎಲ್‌ನಲ್ಲಿ ಕೆಲಸವನ್ನು ಪಡೆದಿದ್ದರು. ತಮ್ಮ ನಟೇಶ, ತಂದೆ ಮೋಹನಲಾಲರ ಪವರ್ ಲೂಮ್ ಮಗ್ಗವನ್ನು ನೋಡಿಕೊಂಡಿದ್ದ. ಸುಂದರ ಅವರನ್ನು ಹೊರತುಪಡಿಸಿ ಮನೆಯ ಎಲ್ಲ ಸದಸ್ಯರು ನನ್ನಲ್ಲಿ ಆಗಾಗ ಚಿಕಿತ್ಸೆಗೆ ಬರುತ್ತಿದ್ದರು. ಒಮ್ಮೆ ಮೋಹನ ಲಾಲರು ಬಾತ್ರೂಮ್‌ನಲ್ಲಿ ಕಾಲು ಜಾರಿ ಬಿದ್ದಾಗ, ನಾನು, ಅವರ ಮನೆಗೆ ಚಿಕಿತ್ಸೆಗಾಗಿ ಹೋಗಿದ್ದೆ.

ಹೀಗೆ ಆ ಮನೆಯವರಿಗೆ ಪರಿಚಯದೊಂದಿಗೆ ಸ್ವಲ್ಪ ಸಲಿಗೆಯು ನನ್ನಲ್ಲಿ ಬೆಳೆಯಿತು. ಆಗ ಒಮ್ಮೆ ವಿಮಲಾ ನನ್ನಲ್ಲಿಗೆ ಬಂದು "ಡಾಕ್ಟ್ರೇ, ನಮ್ಮ ಯಜಮಾನರಿಗೆ ಈಗ ಎರಡು ತಿಂಗಳಿನಿಂದ ಮುಂಗಾಲಿನ ಉರಿ ಎಂದು ರಾತ್ರಿ ಹೊತ್ತು ಟಬ್ಬಿನಲ್ಲಿ ತಣ್ಣೀರನ್ನು ತುಂಬಿಸಿ, ಕಾಲನಿಟ್ಟು ಕುಳಿತುಕೊಳ್ಳುತ್ತಾರೆ. ಉಷ್ಣವಾಗಿದೆ, ಅದರಿಂದ ಈ ರೀತಿಯ ಉರಿಯಾಗುತ್ತಿದೆ ಎಂದು ಹೇಳುತ್ತಾರೆ. ಡಾಕ್ಟ್ರೇ ಇದಕ್ಕೆ ಏನು ಕಾರಣ?" ಎಂದು ಕೇಳಿದಳು.

"ಆ ರೀತಿಯ ಉರಿ ಪ್ರಾರಂಭವಾಗಿ ಎರಡು ತಿಂಗಳಾದರೂ ಇಲ್ಲಿಗೆ ಏಕೆ ಬರಲಿಲ್ಲ?" ಎಂದು ವಿಮಲಾಳನ್ನು ಕೇಳಿದೆ.

"ಅವರಿಗೆ ಡಾಕ್ಟ್ರಲ್ಲಿಗೆ ಬರುವುದೆಂದರೆ ಉದಾಸೀನ" ಎಂದಳು. ಸಾಮಾನ್ಯವಾಗಿ ಡಯಾಬಿಟಿಸ್ ಇದ್ದವರಿಗೆ ಅಥವಾ ವಿಟಮಿನ್ ಬಿ12 ಕೊರತೆಯಾದಾಗಲೂ ಪಾದದ ಉರಿ ಕಾಣಿಸಿಕೊಳ್ಳುತ್ತದೆ. ಡಯಾಬಿಟಿಸ್ ಇದ್ದವರಲ್ಲಿ ಕಾಲಿನ ನರಗಳ ಹೊರಕವಚದಲ್ಲಿನ ಬದಲಾವಣೆಯಾಗಿ ಪಾದದಲ್ಲಿ ಉರಿ ಹಾಗೂ ಚುಚ್ಚಿದ ಅನುಭವ, ಜೋಮು ಇತ್ಯಾದಿಗಳು ಕಾಣಿಸಿಕೊಳ್ಳುತ್ತದೆ. ಇದನ್ನೆಲ್ಲಾ ಸಂಕ್ಷಿಪ್ತವಾಗಿ ವಿಮಲಾಳಿಗೆ ಹೇಳಿದೆ. ನಂತರ ಸುಂದರ್ ಡಯಾಬಿಟಿಸ್ ಟೆಸ್ಟ್ ಮಾಡಿಸಿ, ರಿಪೋರ್ಟ್ ತೆಗೆದುಕೊಂಡು ಬಂದರು. ಸುಂದರನಿಗೆ ಡಯಾಬಿಟಿಸ್ ಇರಲಿಲ್ಲ, ಬಿ 12 ವಿಟಮಿನ್ ಕೊರತೆ ಇರಬಹುದೆಂದು ಊಹಿಸಬಹುದೇ ವಿನಃ ಆ ಕಾಲದಲ್ಲಿ ಅದನ್ನು ಪರೀಕ್ಷಿಸುವ ಲ್ಯಾಬ್ ಬೆಂಗಳೂರಿನಲ್ಲಿಯೂ ಇರಲಿಲ್ಲ. ಹಾಗಾಗಿ ಬಿ12 ವಿಟಮಿನ್ ಔಷಧಿಯ ಒಂದು ಕೋರ್ಸನ್ನು ಮಾಡಿ ಪರಿಣಾಮದಿಂದ ತಿಳಿಯಬೇಕಿತ್ತು. ಇವನ್ನೆಲ್ಲ ಅವರಿಗೆ ವಿವರಿಸಿ ನಾಳೆಯಿಂದಲೇ

ಪ್ರಾರಂಭಿಸೋಣ ಎಂದು ಇಂಜೆಕ್ಷನ್ ಬರೆದುಕೊಟ್ಟೆ.

ಮರುದಿನ ಇಂಜೆಕ್ಷನ್ ಪಡೆಯಲು ವಿಮಲಾಳೊಂದಿಗೆ ಸುಂದರ ಬಂದ. ಇಂಜೆಕ್ಷನ್‌ಅನ್ನು ಸೊಂಟದ ಮಾಂಸ ಖಂಡಕ್ಕೆ ಆಳವಾಗಿ ಕೊಡಬೇಕಾಗಿತ್ತು. ಅದಕ್ಕಾಗಿ ಬಟ್ಟೆಯನ್ನು ಸಡಿಲಿಸುವಂತೆ ಸುಂದರನಿಗೆ ಹೇಳಿದೆ. ಆಗ ಸುಂದರನ ಬಟ್ಟೆಯೊಳಗಿನ ದೇಹದಲ್ಲಿ, ಸೋರಿಯಾಸಿಸ್ ಚರ್ಮದ ಕಾಯಿಲೆ ಇರುವುದು ನನಗೆ ಕಂಡಿತು. ಈ ತರದ ಕಾಯಿಲೆಯ ಬಗ್ಗೆ ಚರ್ಚಿಸಲು ಕೆಲವರು ಬಹಳ ಮುಜುಗರ ಪಡುತ್ತಾರೆ. ಹಾಗಾಗಿ ನಾನು ಅದೇನನ್ನೂ ವಿಚಾರಿಸದೆ ಕಳುಹಿಸಿದೆ.

ಇನ್ನೊಮ್ಮೆ ವಿಮಲಾ ಒಬ್ಬಳೇ ಬಂದಾಗ ನಿಧಾನವಾಗಿ ಸುಂದರನ ಸೋರಿಯಾಸಿಸ್ ಕಾಯಿಲೆಯ ಬಗ್ಗೆ ವಿಚಾರಿಸಿದೆ. "ಯಾರಾದರೂ ಚರ್ಮರೋಗ ವೈದ್ಯರಲ್ಲಿ ಚಿಕಿತ್ಸೆ ನಡೆಯುತ್ತಿದೆಯೆ?" ಎಂದು ಕೇಳಿದೆ.

"ಒಂದೆರಡು ಬಾರಿ ಚರ್ಮರೋಗ ತಜ್ಞರಲ್ಲಿ ಹೋಗಿ ಸುಮಾರು 3-4 ತಿಂಗಳುಗಳ ಕಾಲ ಔಷಧೋಪಚಾರ ನಡೆಸಿದರೂ ಏನೂ ಪ್ರಯೋಜನ ಕಾಣಲಿಲ್ಲ, ಈಗ ಆರೇಳು ತಿಂಗಳುಗಳಿಂದ ಆಯುರ್ವೇದ ಔಷಧವನ್ನು ಮಾಡುತ್ತಿದ್ದಾರೆ ಮತ್ತು ಅವರಿಗೆ ಆಯುರ್ವೇದದಲ್ಲಿ ನಂಬಿಕೆಯು ಹೆಚ್ಚು" ಎಂದಳು.

ಈ ಸೋರಿಯಾಸಿಸ್ ಕಾಯಿಲೆ, ಇಸುಬು ರೋಗದ ತರಹವೇ ಇರುತ್ತದೆ. ಚರ್ಮದ ಹೊರಪದರ ದಪ್ಪವಾಗಿ ದೊರಗಾಗಿ ಬಿಳಿಯ ಹೊಟ್ಟು ಕಾಣಿಸಿಕೊಳ್ಳುತ್ತದೆ. ಜೊತೆಗೆ ತುರಿಕೆಯೂ ಪ್ರಾರಂಭವಾಗುತ್ತದೆ ಇದಕ್ಕೆ ನಿಜವಾದ ಕಾರಣ ಹಾಗೂ ಉಪಶಮನಕ್ಕೆ ಔಷಧ ಕಂಡು ಹಿಡಿಯಲಾಗಲಿಲ್ಲ. ಆದರೆ ಇದನ್ನು ಸ್ವಲ್ಪ ಮಟ್ಟಿಗೆ ಹಿಡಿತದಲ್ಲಿಡುವ ಔಷಧಿ ಇದೆ. ಆಯುರ್ವೇದ, ಹೋಮಿಯೋಪತಿ ತಜ್ಞರಲ್ಲಿ ಕೆಲವರು ಇದನ್ನು ಸಂಪೂರ್ಣ ಗುಣಪಡಿಸುವ ಭರವಸೆಯನ್ನು ನೀಡುತ್ತಾರೆ. ಆದರೆ ನನ್ನ ಹಲವು ರೋಗಿಗಳು ಈ ಔಷಧಗಳನ್ನು ತಿಂಗಳುಗಟ್ಟಲೆ ಸೇವಿಸಿಯೂ ಪರಿಣಾಮ ಕಂಡಿರಲಿಲ್ಲ. ಆದರೂ ಈ ಔಷಧಿಯ ಬಗ್ಗೆ ನನಗೆ ಕುತೂಹಲ ಹುಟ್ಟಿತು. ಅದಕ್ಕಾಗಿ ವಿಮಲಾಳಿಗೆ ಇನ್ನೊಮ್ಮೆ ಬರುವಾಗ ಸುಂದರ ತೆಗೆದುಕೊಳ್ಳುವ ಆಯುರ್ವೇದದ ಮಾತ್ರೆಯ ಡಬ್ಬವನ್ನು ತರಲು ಸೂಚಿಸಿದೆ. ಮತ್ತು 'ಈ ಮಾತ್ರೆಗಳನ್ನು ತೆಗೆದುಕೊಳ್ಳುವ ಮೊದಲೇ ಸುಂದರನಿಗೆ ಕಾಲಿನ ಉರಿ ಇತ್ತೇ ಅಥವಾ ನಂತರದಲ್ಲಿ ಪ್ರಾರಂಭವಾಯಿತೋ?' ಎಂದು ವಿಚಾರಿಸಿದೆ. ವಿಮಲಾಳು "ಡಾಕ್ಟರ್, ಈ ಮಾತ್ರೆಗಳನ್ನು ಪ್ರಾರಂಭಿಸಿ ಎರಡು ತಿಂಗಳಿನ ನಂತರ ಕಾಲಿನ ಉರಿ ಪ್ರಾರಂಭವಾಯಿತು. ಈಗ ಮಾತ್ರೆಯನ್ನು ಪ್ರಾರಂಭಿಸಿ ಏಳೆಂಟು ತಿಂಗಳುಗಳು ಕಳೆದಿದೆ. ಅವರಾದರೂ ಆಯುರ್ವೇದ ಮಾತ್ರಯಿಂದ ಏನೂ ಆಗಿಲ್ಲ, ನನಗೆ ಉಷ್ಣವಾಗಿದೆ ಎನ್ನುತ್ತಾರೆ" ಎಂದಳು.

ವಿಮಲಾ ಅಂದೇ ಸಂಜೆ, ಪತಿಯ ಮಾತ್ರೆ ಡಬ್ಬವನ್ನು ತಂದಳು. ಅದು

30 ಮಾತ್ರೆಗಳ ಒಂದು ಡಬ್ಬವಾಗಿತ್ತು. ಅದರ ಮೇಲೆ ಔಷಧಿಯ ವಿವರಗಳು ಬರೆದಿತ್ತು. ಅದನ್ನು ನೋಡುವಾಗ ನನ್ನ ಗಮನಕ್ಕೆ ಬಂದದ್ದು ಪಾದರಸದ ಭಸ್ಮ (mercury oricli)ವು ನಾಲ್ಕಾರು ಔಷಧಿಗಳ ಮಿಶ್ರಣದಲ್ಲಿ ಒಂದಾಗಿತ್ತು. ನರ ರೋಗಗಳಲ್ಲಿ ಒಂದಾದ ಪೆರಿಫೆರಲ್ ನ್ಯುರೋಪಥಿಗೆ ಒಂದು ಕಾರಣ, ಪಾದರಸದ ಟಾಕ್ಸಿನ್ ಹಾಗೂ ಈ ರೋಗದ ಲಕ್ಷಣ ಕಾಲಿನ ಉರಿ ಎಂಬುದು ನನ್ನ ಅರಿವಿಗೆ ಬಂತು. ಸುಂದರ ಅವರು ತೆಗೆದುಕೊಳ್ಳುವ ಔಷಧಿಯಲ್ಲಿಯ ಪಾದರಸದಿಂದ ಈ ಪೆರಿಫೆರಲ್ ನ್ಯುರೋಪಥಿ ಕಾಣಿಸಿಕೊಂಡಿರಬಹುದು ಎಂದು ಅನಿಸಿತು.

ಈ ಆಯುರ್ವೇದದ ಔಷಧವನ್ನು ನೀಡಿದ ಡಾಕ್ಟರ್ ಬಗ್ಗೆ ವಿಮಲಾಳಲ್ಲಿ ವಿಚಾರಿಸಿದೆ. ಅವಳು "ಸರ್, ಅವರು ಬಹಳ ದೊಡ್ಡ ಡಾಕ್ಟರ್. ರಾಜ್ಯಪಾಲರಿಂದ ಗೌರವ ಡಾಕ್ಟರೇಟ್ ಪಡೆದವರು" ಎಂದಳು. ಅವರ ನಂಬಿಕೆಯನ್ನು ಬದಲಿಸುವುದು ಕಷ್ಟವೆಂದು ನನಗೆ ಅನಿಸಿತು. ಆದರೂ "ಈ ಮಾತ್ರೆಯಿಂದಲೇ ಸುಂದರವರಿಗೆ ಕಾಲಿನ ಉರಿ ಪ್ರಾರಂಭವಾಗಿದೆ ಎಂದೆ. ಆಗ ವಿಮಲಾ, ನಾವು ಈ ಕಾಲಿನ ಉರಿಯ ವಿಚಾರವಾಗಿ ಅವರ ಹತ್ತಿರವೂ ವಿಚಾರಿಸಿದ್ದೇವೆ. ನಿಮ್ಮಂತೆ ಆ ಡಾಕ್ಟರ್ ಕೂಡ, ವಿಟಮಿನ್ ಬಿ12 ತೆಗೆದುಕೊಳ್ಳಲು ಸಲಹೆ ನೀಡಿದ್ದರು. ಇನ್ನೇನು ನೀವೇ ಇಂಜೆಕ್ಷನ್ ಅನ್ನು ಪ್ರಾರಂಭಿಸಿದರಲ್ಲ?" ಎಂದು ಸಮರ್ಥಿಸಿಕೊಂಡಳು.

ಈ ಪಾದರಸದ ಪರಿಣಾಮದ ಬಗ್ಗೆ ಓದಿ ಬಹಳ ದಿನಗಳಾದ ಕಾರಣ, ಇನ್ನೊಮ್ಮೆ ಕೂಲಂಕಶವಾಗಿ ತಿಳಿದು, ಮಾಹಿತಿಯನ್ನು ನೀಡೋಣ ಎಂದು ಸುಮ್ಮನಾದೆ. ಹಾಗೆ ಮನೆಗೆ ಬಂದು ಅದಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ತಿರುವಿ ಹಾಕಿದೆ. ಈ ಪಾದರಸದ ಆಕ್ಸೈಡ್ ಅತಿ ಕಡಿಮೆ ಪ್ರಮಾಣದಲ್ಲಿ ಬಹಳ ದಿನದವರೆಗೆ ಸೇವಿಸಿದರೆ, ಕಿಡ್ನಿ ನರ, ಮೆದುಳು ಹಾಗೂ ಚರ್ಮದ ಮೇಲೆ ದುಷ್ಪರಿಣಾಮವನ್ನು ಬೀರುತ್ತದೆ ಹಾಗೂ ಇದನ್ನು ಗುಣಪಡಿಸಲು ಅಥವಾ ಮೊದಲಿನ ಸ್ಥಿತಿಗೆ ತರಲು ಆಗದಂತಹ ತೊಂದರೆಯನ್ನು ಉಂಟುಮಾಡುತ್ತದೆ ಎಂಬ ವಿವರವನ್ನು ಮನದಟ್ಟು ಮಾಡಿಕೊಂಡೆ.

ಮತ್ತೆ ವಿಮಲಾ ಕ್ಲಿನಿಕ್ಕಿಗೆ ಬಂದಾಗ, ಸುಂದರ ತೆಗೆದುಕೊಳ್ಳುವ ಮಾತ್ರೆಯಲ್ಲಿರುವ ಪಾದರಸದ ಅಂಶದಿಂದ ಆಗುವ ತೊಂದರೆಯನ್ನೂ, ಈಗ ಆಗುತ್ತಿರುವ ಸಮಸ್ಯೆಯನ್ನೂ ಸವಿವರವಾಗಿ ತಿಳಿಸಿದೆ. ಅಷ್ಟೇ ಅಲ್ಲದೆ ನರಗಳು ಸಂಪೂರ್ಣ ಹಾಳಾಗಿ ಇನ್ನೂ ತೊಂದರೆ ಆಗಬಹುದೆಂಬುದನ್ನೂ ಮನದಟ್ಟು ಮಾಡಿದೆ.

ನಂತರ ಈ ಆಯುರ್ವೇದ ಮಾತ್ರೆಗಳನ್ನು ಬಿಟ್ಟು ಬಿ12 ವಿಟಮಿನ್ ಇಂಜೆಕ್ಷನ್‌ಅನ್ನು ಒಂದು ಕೋರ್ಸ್ ಮುಗಿಸಿದರು. ನಂತರ ವಾರಕ್ಕೊಂದರಂತೆ ಇನ್ನೆರಡು ತಿಂಗಳು ಹಾಗೆ ಇಂಜೆಕ್ಷನ್ ತೆಗೆದುಕೊಳ್ಳಲು ಹೇಳಿದೆ. ಆ

ಸಮಯದಲ್ಲಿ ಪಾದರಸದ ಆಕ್ಸೈಡ್ ಪ್ರಮಾಣವನ್ನು ಅರಿಯುವ ರಕ್ತಪರೀಕ್ಷೆಯ ಪರಿಚಯ ಕೂಡ ಇರಲಿಲ್ಲ. ಇದಾದ ನಂತರ ಸೋರಿಯಾಸಿಸ್‌ಗೆ ಚಿಕಿತ್ಸೆ ನೀಡುವುದಾಗಿ ತಿಳಿಸಿದೆ. ಆದರೆ ಈ ಕಾಯಿಲೆ ಹಿಡಿತಕ್ಕೆ ಬರುತ್ತಾದರೂ ಸಂಪೂರ್ಣ ಗುಣವಾಗುವುದಿಲ್ಲ ಎಂದು ಹೇಳಿದೆ. ನಂತರ ಸುಂದರನ ಕಾಲಿನ ಉರಿ ಕಡಿಮೆಯಾಯಿತು.

ಆಯುರ್ವೇದ ಎಂದಾಕ್ಷಣ ಅಡ್ಡ ಪರಿಣಾಮವೇ ಇಲ್ಲ ಎಂದು ತಿಳಿಯಬಾರದು. ಆಯುರ್ವೇದದ ವೈದ್ಯರು ಎಂದವರೆಲ್ಲ ಎಲ್ಲವನ್ನು ಗಮನಿಸುತ್ತಾರೆ ಎಂದು ತಿಳಿದುಕೊಳ್ಳಬಾರದು. ಡಯಾಬಿಟಿಸ್ ಇರುವವರಿಗೆ ಬೇವಿನ ಎಲೆ ಔಷಧಿ ಎಂದು ಸಲಹೆಯನ್ನು ನೀಡುತ್ತಾರೆ. ರೋಗಿಯು ಬೇಗ ಗುಣಗೊಳ್ಳಲು ಅತಿಯಾಗಿ ಬೇವನ್ನು ತಿನ್ನುತ್ತಾರೆ. ಆದರೆ ಬೇವಿನೆಲೆಯಲ್ಲಿರುವ ಆಲ್ಕಲೈಡ್‌ಗಳು ರೋಗಿಯ ಮೂತ್ರಕೋಶ, ಲಿವರ್‌ಗಳ ಮೇಲೆ ಪರಿಣಾಮವನ್ನು ಉಂಟುಮಾಡುತ್ತದೆ. ಡಯಾಬಿಟಿಸ್ ಇರುವವರಲ್ಲಿ ಆ ಕಾಯಿಲೆಯಿಂದಲೇ ಕಿಡ್ನಿ ಸ್ವಲ್ಪ ಪ್ರಮಾಣದಲ್ಲಿ ಹಾಳಾಗಿರುತ್ತದೆ. ಮೇಲಿಂದ ಈ ಔಷಧದ ದುಷ್ಪರಿಣಾಮ ಬಿದ್ದವನ ಮೇಲೊಂದು ಕಲ್ಲೆಂಬಂತೆ ಆಗುತ್ತದೆ.

# ಇಂಜಕ್ಷನ್ ರೋಗ

ಕೆಲವು ವೈದ್ಯರಿಗೆ ರೋಗಿಯನ್ನು ಕಂಡ ತಕ್ಷಣ ಸೂಜಿ ಚುಚ್ಚುವ ಅಭ್ಯಾಸವಿರುತ್ತದೆ. ಬಹುಬೇಗ ಪರಿಣಾಮವಾಯಿತೆಂದು ಭಾವಿಸುವ ರೋಗಿಗಳನ್ನು ಸೆಳೆಯುವ ತಂತ್ರವೂ ಇದಾಗಿರಬಹುದು. ಸುಮಾರು 97–98ರ ಸಮಯ. ಮಾಗಡಿ ರೋಡಿನಲ್ಲಿರುವ ನನ್ನ ಕ್ಲಿನಿಕ್ಕಿನಿಂದ, ಮೂರು ಕ್ರಾಸ್‌ಗಳ ಮುಂದೆ ಡಾ. ರಾಜಾರಾಮ್ ಎನ್ನುವ ವೈದ್ಯರೊಬ್ಬರು ಹೊಸದಾಗಿ ಕ್ಲಿನಿಕ್ ತೆರೆದರು. ರಾಜಾರಾಮರು ಬೆಳಗಿನ ಸಮಯ ಬೇರೆ ಆಸ್ಪತ್ರೆಯಲ್ಲಿ ಕೆಲಸ ಮಾಡಿ, ಸಾಯಂಕಾಲ 6:00 ಯಿಂದ 10 ಗಂಟೆಯ ತನಕ ಇಲ್ಲಿ ಕ್ಲಿನಿಕನ್ನು ನಡೆಸುತ್ತಿದ್ದರು.

ಆ ಭಾಗದ ಹಲವು ರೋಗಿಗಳು, ಅವರಲ್ಲಿ ಹೋಗಲು ಪ್ರಾರಂಭಿಸಿದರು. ಅವರ ಶುಲ್ಕವು ನನಗಿಂತ ಕಡಿಮೆ ಇತ್ತೊ ತಿಳಿಯದು. ನನ್ನ ಕ್ಲಿನಿಕ್‌ನಲ್ಲಿ ಬಹಳ ಹೊತ್ತು ಸರದಿಯಲ್ಲಿ ನಿಲ್ಲಬೇಕಾಗುತ್ತದೆ ಎನ್ನುವ ಕಾರಣವೂ ಇರಬಹುದು. ಇನ್ನೊಂದು ವಿಚಾರವೆಂದರೆ ರಾಜಾರಾಮರು ರೋಗಿಗಳು ಬಂದಾಕ್ಷಣ, ಒಂದು ಇಂಜೆಕ್ಷನ್ ನೀಡುತ್ತಿದ್ದರು. ಅನೇಕ ರೋಗಿಗಳಿಗೆ ಇಂಜೆಕ್ಷನ್ ಪಡೆದರೆ ಔಷಧವನ್ನು ಪಡೆದಂತೆ! ಚಿಕಿತ್ಸೆ ಸರಿಯಾಯಿತು! ಡಾಕ್ಟರ್ ಚೆನ್ನಾಗಿದ್ದಾರೆ! ಎಂಬಂತಹ ಭ್ರಮೆಗಳು ಇರುತ್ತವೆ. ನನ್ನ ಬಗ್ಗೆ ಹಾಗೊಂದು ಆಕ್ಷೇಪವೂ ಇತ್ತು. ‘ಹಂದೆ ಡಾಕ್ಟರ್, ಇಂಜೆಕ್ಷನ್ನೇ ಕೊಡುವುದಿಲ್ಲ’ ಎಂದು ಆಡಿಕೊಂಡ ಮಾತು ನನ್ನ ಕಿವಿಯವರೆಗೂ ತಲುಪಿತ್ತು. ಆವಶ್ಯಕತೆಯೊ, ಅನಿವಾರ್ಯತೆಯೊ ಇಲ್ಲದೆ ನೇರವಾಗಿ ಇಂಜಕ್ಷನ್ ಬಳಸಬಾರದು ಎಂಬುದು ನನ್ನ ಅಭಿಪ್ರಾಯ.

ರಾಜಾರಾಮರು ಕ್ಲಿನಿಕ್ ಪ್ರಾರಂಭಿಸಿ ಒಂದುವರೆ ವರ್ಷಗಳಿಂದ ಭಾನುವಾರವು ರಜೆ ಮಾಡದೆ ಕ್ಲಿನಿಕ್‌ಅನ್ನು ತೆರೆಯುತ್ತಿದ್ದರು. ಇದು ಹೊಸದಾಗಿ ಕ್ಲಿನಿಕ್ ತೆರೆದಾಗ ಪ್ರಚಾರಕ್ಕಾಗಿ, ರಜೆ ಇಲ್ಲದೆ ಕೆಲಸ ಮಾಡುವುದು ಸಹಜ. ನಾನು ಕ್ಲಿನಿಕ್ ಪ್ರಾರಂಭಿಸಿ ಅದಾಗಲೇ ಸುಮಾರು 20 ವರ್ಷಗಳು ಕಳೆದಿದ್ದರಿಂದ, ಸಹಜವಾಗಿಯೇ ಭಾನುವಾರ ರಜಾ ಮಾಡುತ್ತಿದ್ದೆ. ಆದ್ದರಿಂದ ತುರ್ತಿರುವ ರೋಗಿಗಳು ಅವರಲ್ಲಿ ಹೋಗುವುದು ಅನಿವಾರ್ಯವಾಗಿತ್ತು.

ಡಾಕ್ಟರ್ ರಾಜಾರಾಮರನ್ನು ಔಷಧ ಕಂಪನಿಗಳು ಏರ್ಪಡಿಸುವ ಸಿ.ಎಂ. ಎಫ್. ಮೀಟಿಂಗ್‌ಗಳಲ್ಲಿ ಒಂದೆರಡು ಬಾರಿ ಭೇಟಿಯಾಗಿ ಮಾತನಾಡಿಸಿದ್ದೆ. ಅವರಾದರೂ ಸೀನಿಯರ್ ಡಾಕ್ಟರ್ ಎಂದು ನನ್ನಲ್ಲಿ ಬಹಳ ಗೌರವದಿಂದ

ನಡೆದುಕೊಂಡಂತಿತ್ತು.

ಒಂದು ರಾತ್ರಿ ಸುಮಾರು ಎಂಟು ಗಂಟೆಯ ಸಮಯ, ನಾನು ಕ್ಲಿನಿಕ್ಕಿನಲ್ಲಿ ರೋಗಿಗಳನ್ನು ಪರೀಕ್ಷಿಸುತ್ತಾ ಕುಳಿತಿದ್ದೆ. ಅಷ್ಟರಲ್ಲಿ ಹೊರಗಡೆಯ ವೇಟಿಂಗ್ ರೂಮಿನಲ್ಲಿ ಗುಜುಗುಜು ಕೇಳಿಸಿತು. "ಡಾ. ರಾಜಾರಾಮರು ಬಂದಿದ್ದಾರೆ, ಅವರಿಗೆ ಏನೋ ತೊಂದರೆ ಆಗಿದೆ ಸ್ವಲ್ಪ ದಾರಿ ಬಿಡಿ" ಎಂದು ತುಂಬಿದ ರೋಗಿಗಳ ಮಧ್ಯೆ ಅವಕಾಶವನ್ನು ಮಾಡಿಕೊಳ್ಳುವ ಮಾತು ಕೇಳಿಸಿತು. ನನ್ನ ಪರಿಚಿತರೊಬ್ಬರು ರಾಜಾರಾಮ ಡಾಕ್ಟರರಿಗೆ ಆಸರೆಯಾಗಿ ಕರೆದುಕೊಂಡು ಬಂದಿದ್ದರು. ಡಾಕ್ಟರ್ ರಾಜಾರಾಮ್ ಅವರು ಮಾತ್ರ ಸಾಮಾನ್ಯ ರೋಗಿಗಿಂತಲೂ ಕಡೆಯಾಗಿ, "ಅಯ್ಯೋ ನೋವು ಏನಾದರೂ ಮಾಡಿ ಡಾಕ್ಟ್ರೇ" ಎಂದು ಆರ್ತವಾಗಿ ಕೂಗಿಕೊಳ್ಳುತ್ತಿದ್ದರು. ತಾನೊಬ್ಬ ವೈದ್ಯನೆಂಬ ವಿವೇಕವು ಮರೆಯಾಗಿತ್ತು.

"ಗಾಬರಿಯಾಗಬೇಡಿ ಏನಾಯಿತು?" ಎಂದು ಸಮಾಧಾನದಿಂದ ವಿಚಾರಿಸಿದೆ. ಯಾವನೋ ಒಬ್ಬ ರೋಗಿಗೆ ರಾಜಾರಾಮರು ಇಂಜೆಕ್ಷನ್ ನೀಡುತ್ತಿದ್ದರು. ಆತನಿಗೆ ಇಂಜೆಕ್ಷನ್ ಭಯವೋ ಅಥವಾ ನೀಡುತ್ತಿದ್ದ ಇಂಜೆಕ್ಷನ್‌ನ ನೋವೊ ತಿಳಿಯದು, ಆ ರೋಗಿ ಇವರ ಕೈಯನ್ನೇ ಅಲುಗಾಡಿಸಿ ಬಿಟ್ಟ. ಆತನ ದೇಹದಿಂದ ಹೊರ ಬಿದ್ದ ಸೂಜಿ, ಕೈ ಕಂಪಿಸಿದ ಕಾರಣದಿಂದ ಲಂಬವಾಗಿ ರಾಜಾರಾಮರ ಪಾದದ ಮೇಲೆ ಬಿದ್ದು ಸುಮಾರು ಮುಕ್ಕಾಲು ಇಂಚಿನಷ್ಟು ಒಳಗೆ ಸೇರಿತ್ತು. ಬಹುಶ ಎಲುಬಿನವರೆಗೂ ಸೂಜಿ ಹೋಗಿರಬಹುದು. ಡಾಕ್ಟರ್ ರಾಜಾರಾಮರ ಜೊತೆ ಬಂದ ನನ್ನ ಪರಿಚಿತರೆ, ಆ ಸೂಜಿಯನ್ನು ಎಳೆದು ತೆಗೆದರಂತೆ. "ಹಂದೆಯವರೇ, ಸಹಿಸಲಸಾಧ್ಯವಾದ ನೋವು, ಟೆಟಾನಸ್ ವ್ಯಾಕ್ಸಿನ್ ಕೊಡುತ್ತೀರಾ? ಹಾಗೆ ಏನಾದರೂ ನೋವು ನಿವಾರಕವನ್ನು ಕೊಡಿ" ಎಂದು ಅಂಗಲಾಚುವಂತೆ ಬಡಬಡಿಸುತ್ತಿದ್ದರು.

ಟೆಟಾನಸ್ ವ್ಯಾಕ್ಸಿನ್ ಜೊತೆಗೆ, ಒಂದು ನೋವು ನಿವಾರಕ ಇಂಜೆಕ್ಷನ್ ಅನ್ನು ನೀಡಿದೆ. ಸ್ವಲ್ಪ ಸುಧಾರಿಸಿಕೊಂಡ ಡಾಕ್ಟರ್ ಮನಸ್ಸಿನಲ್ಲಿ ಇನ್ನೊಂದು ಆತಂಕ ಹುಟ್ಟಿತು. ಆ ಸಮಯದಲ್ಲಿ ಏಡ್ಸ್ ರೋಗದ ಹಾವಳಿಯು ಅತಿಯಾಗಿತ್ತು. ಇಂಜೆಕ್ಷನ್ ಸೂಜಿಯಿಂದಲೂ ಈ ರೋಗ ಹರಡುವ ಸಂಭವವಿತ್ತು. ಹಾಗಾಗಿ ಏಡ್ಸ್ ರೋಗವೇನಾದರೂ ಬಂದರೆ ಎಂಬ ಭಯದಿಂದ, 'ಡಾಕ್ಟರ್, ಏಡ್ಸ್ ರೋಗದ ಟೆಸ್ಟ್ ಮಾಡಿಸಬೇಕಾ?' ಎಂದು ಕೂಡ ಕೇಳಿದರು.

ನಾನು ಮೊದಲು ಸುಧಾರಿಸಿಕೊಳ್ಳುವಂತೆ ಹೇಳಿ, ಇನ್ಫೆಕ್ಷನ್ ಆಗದಂತೆ ಆಂಟಿಬಯೋಟಿಕ್ ಮಾತ್ರೆಗಳನ್ನು ಬರೆದು, ಅವರನ್ನು ಕರೆದುಕೊಂಡು ಬಂದ ನನ್ನ ಪರಿಚಿತರಲ್ಲಿ ಸೇಫ್ ಆಗಿ ಆಟೋದಲ್ಲಿ ಮನೆಗೆ ತಲುಪಿಸುವಂತೆ ಹೇಳಿದೆ.

ಇನ್ನು ಮತ್ತೆ ಎರಡು ಮೂರು ದಿನಗಳ ನಂತರ, ಡಾಕ್ಟರ್ ರಾಜಾರಾಮರು

ಕ್ಲಿನಿಕ್ಕಿಗೆ ಬಂದು ಕಾಲಿನ ಚಿಕಿತ್ಸೆಯನ್ನು ಪಡೆದರು. ಜೊತೆಗೆ ನನ್ನ ಮಾತನ್ನು ಕೇಳುವ ವ್ಯವಧಾನದಲ್ಲೂ ಇದ್ದರು. ಆಗ "ರೋಗಿಗಳಿಗೆ ಅನವಶ್ಯಕವಾಗಿ ಇಂಜೆಕ್ಷನ್ ನೀಡುವ ಅಭ್ಯಾಸವನ್ನು ಕಡಿಮೆ ಮಾಡಿಕೊಳ್ಳುವಂತೆ ಸೂಚನೆಯನ್ನು ನೀಡಿದೆ. ಹಾಗೆ ಇವರು ಇಂಜೆಕ್ಷನ್ ಚುಚ್ಚಿದ ರೋಗಿಗೆ, ನಿಮ್ಮ ಸ್ವಂತ ಖರ್ಚಿನಿಂದಲೇ ಹೆಚ್‌ಐವಿ ಟೆಸ್ಟ್ ಮಾಡಿಸಿ ನೋಡಿ. ಅವನಿಗೆ ಎಚ್.ಐ.ವಿ. ಇದ್ದರೆ ತಾನೆ ನಿಮಗೆ ಬರುವ ಸಾಧ್ಯತೆ?" ಎಂಬ ಸಲಹೆಯನ್ನು ನೀಡಿದೆ.

ನನ್ನ ಸಲಹೆಯಂತೆ ಆ ರೋಗಿಗೆ ಹೆಚ್‌ಐವಿ ಟೆಸ್ಟ್ ಮಾಡಿಸಿದಾಗ, ನಾರ್ಮಲ್ ಇರುವುದು ಖಚಿತವಾಯಿತು. ಅದರಿಂದ ರಾಜಾರಾಮರ ಆತಂಕವು ಕಡಿಮೆಯಾಯಿತು. ಮುಂದೆ ರಾಜಾರಾಮರು ಎಂ.ಡಿ. ಮುಗಿಸಿ ಮೆಡಿಕಲ್ ಕಾಲೇಜಿನಲ್ಲಿ ಪ್ರೊಫೆಸರ್ ಆಗಿ ವೃತ್ತಿ ಜೀವನವನ್ನು ಮುಂದುವರಿಸಿದರು. ಆಗಾಗ ಮೀಟಿಂಗ್‌ಗಳಲ್ಲಿ ಭೇಟಿಯಾಗುತ್ತಿದ್ದರು.

ಅವಶ್ಯಕತೆ ಇಲ್ಲದೆ ರೋಗಿಗಳಿಗೆ ಇಂಜೆಕ್ಷನ್ ಚುಚ್ಚುವ ಅಭ್ಯಾಸವುಳ್ಳ ಡಾಕ್ಟರರಿಗೆ, ಹೀಗೆ ತನ್ನಿಂದ ತಾನೇ ಇಂಜೆಕ್ಷನ್ ಚುಚ್ಚಿಕೊಂಡ ಸಂದರ್ಭ ತುಂಬಾ ಮಾರ್ಮಿಕವಾದದ್ದು. ವೈದ್ಯರಾದವರೇ ನೋವು ನಷ್ಟಗಳಲ್ಲಿ ಮನಸ್ಸಿನ ಸಮಾಧಾನದಿಂದಲೇ ರೋಗ ಎಷ್ಟೋ ವಾಸಿಯಾಗುತ್ತದೆ ಎಂಬ ಮೂಲ ಮಂತ್ರವನ್ನೇ ಮರೆತರೆ ಇನ್ನು ರೋಗಿಗಳಿಗೆ ಉಪದೇಶಿಸುವುದೆಂತು?!!

# ನಿವೃತ್ತಿ

ಶರೀರದ ಆರೋಗ್ಯಕ್ಕೆ ವಿರೇಚನ ಎಷ್ಟು ಮುಖ್ಯವೊ, ಮನಸ್ಸಿನ ಆರೋಗ್ಯಕ್ಕೆ ಆಲೋಚನೆಯ ವಿರೇಚನ ಅಷ್ಟೇ ಮುಖ್ಯವಾದುದು. ಹೀಗೆ ಮನಸ್ಸಿನ ವಿರೇಚನಕ್ಕಾಗಿ ವಿಶ್ವಾಸದ ವ್ಯಕ್ತಿಯೊಬ್ಬನ ಸಹಾಯ, ಪ್ರತಿ ವ್ಯಕ್ತಿಗೂ ಬೇಕಾಗುತ್ತದೆ. ಅವರವರ ಆಲೋಚನೆಯ ತರತಮದ ಮೇಲೆ ಅಂತಹ ವಿಶ್ವಾಸದ ಸ್ಥಳವನ್ನು ಹುಡುಕಿಕೊಳ್ಳುತ್ತಾರೆ ಅಥವಾ ಸಿಗುತ್ತದೆ. ನನ್ನಲ್ಲಿ ಬರುವ ಅನೇಕ ರೋಗಿಗಳಿಗೆ ದೈಹಿಕ ಆರೋಗ್ಯದೊಂದಿಗೆ ಮನಸ್ಸಿಗೊಂದು ವಿರಾಮ ಬೇಕೆಂದು ಬರುವವರಿದ್ದಾರೆ. ಎಲ್ಲಾ ಅನಾರೋಗ್ಯಗಳು ಮನಸ್ಸಿನ ಕಾರಣದಿಂದಲೇ ಹೆಚ್ಚು ಕಡಿಮೆ ಆಗುತ್ತದೆ. ಹಾಗಾಗಿ ರೋಗಿಗೊಂದು ಸಾಂತ್ವನವನ್ನು ಕೊಡುವುದು ನನ್ನ ಚಿಕಿತ್ಸೆಯ ಭಾಗವೂ ಹೌದು, ವೈದ್ಯ ಧರ್ಮವು ಹೌದು.

ಬೆಂಗಳೂರಿನಲ್ಲಿ ನಾನು ಕ್ಲಿನಿಕ್ಕನ್ನು ತೆರೆದ ಮೇಲೆ, ಸುಮಾರು 56 – 57 ವರ್ಷದ ಪುಟ್ಟರಾಜು ಎಂಬ ರೋಗಿಗಳು ನಿರಂತರವಾಗಿ ನನ್ನ ಚಿಕಿತ್ಸಾಲಯಕ್ಕೆ ಬರುತ್ತಿದ್ದರು. ಅಧಿಕ ರಕ್ತದೊತ್ತಡದ ಕಾರಣದಿಂದ ತಿಂಗಳಿಗೆ ಅಥವಾ ಎರಡು ತಿಂಗಳಿಗೊಮ್ಮೆ ನನ್ನಲ್ಲಿಗೆ ಬರುವ ಅನಿವಾರ್ಯತೆ ಪುಟ್ಟರಾಜರಿಗೆ ಇತ್ತು. ಹಾಗೆ ಇನ್ನುಳಿದ ಅನಾರೋಗ್ಯದ ಸಮಸ್ಯೆಗೂ ನನ್ನಲ್ಲಿಯೇ ಬರುತ್ತಿದ್ದರು. ನನ್ನ ಕ್ಲಿನಿಕ್ಕಿನಿಂದ ಸುಮಾರು ಎರಡು ಕಿಲೋಮೀಟರ್ ದೂರದಲ್ಲಿ ಅವರ ಮನೆ ಇತ್ತು. ಅವರ ಬಲಗಾಲು ಸ್ವಲ್ಪ ಊನವಿದ್ದ ಕಾರಣ, ನ್ಯೂನತೆಯ ಆಧಾರದಿಂದ ಸರಕಾರಿ ಸ್ವಾಮ್ಯದ ಐ.ಟಿ.ಐ.ನಲ್ಲಿ ಅವರಿಗೆ ಉದ್ಯೋಗವು ಸಿಕ್ಕಿತ್ತು.

ಎರಡು ಮಕ್ಕಳ ಪುಟ್ಟ ಸಂಸಾರ ಪುಟ್ಟರಾಜರದಾಗಿತ್ತು. ಆದರೆ ಸರಾಗವಾಗಿ ನಡೆಯಬಹುದಾಗಿದ್ದ ಸಂಸಾರಕ್ಕೆ ಮಗ ಮುರಳಿಯ ಚಿಂತೆ ಮುಳ್ಳಾಗಿ ಚುಚ್ಚಿಕೊಂಡಿತು. ಸುಮಾರು 22 ವರ್ಷದ ಮಗ ಎಸ್.ಎಸ್.ಎಲ್.ಸಿ.ಯನ್ನು ಮುಗಿಸಿರಲಿಲ್ಲ. ಅವನ ಓದಿಗೆ, ತಿಳುವಳಿಕೆಗೆ ತಕ್ಕನಾದ ಕೆಲಸವನ್ನು ಕೊಡಿಸಿದರೆ ಅದನ್ನೂ ಅರ್ಧಕ್ಕೆ ಬಿಡುತ್ತಿದ್ದ. ಇಷ್ಟೇ ಅಲ್ಲದೆ ಮನೆಯ ಮುಂದೆ ಬೀಳುವ ಸಿಗರೇಟಿನ ತುಂಡುಗಳು ಮಗನ ದುಶ್ಚಟವನ್ನು ಹೇಳಿತು. ಸಮಾನಶೀಲರಾದ ಸ್ನೇಹಿತರ ಸಂಗವು ಮಗನಿಗೆ ಇತ್ತು.

ಪುಟ್ಟರಾಜರು ಕ್ಲಿನಿಕ್ಕಿಗೆ ಬಂದಾಗಲೆಲ್ಲ ಮಗ ಮುರಳಿಯ ಕಥೆಯನ್ನು ಹೇಳಿಕೊಂಡು ಅಳಲನ್ನು ತೋಡಿಕೊಳ್ಳುತ್ತಿದ್ದರು. ಕೇಳಬೇಕಾದದ್ದು ನನ್ನ ಅನಿವಾರ್ಯತೆ. ಪ್ರತಿಯಾಗಿ ಸಾಂತ್ವನವನ್ನು ಹೇಳಬೇಕಾದದ್ದು ನನ್ನ

ಮಾನವೀಯತೆ. ತೋಚಿದ ಸಲಹೆಯನ್ನು ಸೂಚಿಸುತ್ತಿದ್ದೆ. ಹಲವು ಬಾರಿ ಮಕ್ಕಳು ದಾರಿ ತಪ್ಪುವುದಕ್ಕೆ ಪಾಲಕರೆ ಕಾರಣರಾಗಿರುತ್ತಾರೆ. ಮಕ್ಕಳ ಮೇಲಿನ ಮೋಹ, ಅತಿಯಾದ ವಿಶ್ವಾಸಗಳು ಮಕ್ಕಳನ್ನು ತಿದ್ದುವುದಕ್ಕೆ ಅಥವಾ ಬುದ್ಧಿ ಹೇಳುವುದಕ್ಕೆ ಪ್ರೀತಿಯ ಬಂಧಕವಾಗಿರುತ್ತದೆ. ಮುಂದೆ ಬಲಿತ ಮಕ್ಕಳನ್ನು ಬಗ್ಗಿಸುವುದಕ್ಕೆ ಪೋಷಕರು ದುರ್ಬಲರಾಗಿರುತ್ತಾರೆ. ತಂದೆ ತಾಯಿಗಳ ಈ ದೌರ್ಬಲ್ಯದ ಏಣಿಯನ್ನು ಹತ್ತಿ ಮೆರೆದ ಮಕ್ಕಳು, ದುರ್ನಡತೆಯ ಹಾವಿನ ಬಾಯಿಯಲ್ಲಿ ಸಿಕ್ಕು ಪಾತಾಳವನ್ನು ಸೇರುತ್ತಾರೆ. ಪುಟ್ಟರಾಜುಗಳಂತೂ ಮಗನ ಕಣ್ಣಲ್ಲಿ ಕಣ್ಣಿಟ್ಟು ಮಾತನಾಡುವ ಧೈರ್ಯವನ್ನು ಕಳೆದುಕೊಂಡಿದ್ದರು.

ಹೀಗೆ ಒಮ್ಮೆ ಪುಟ್ಟರಾಜು ಅವರು ಕ್ಲಿನಿಕ್ಕಿಗೆ ಬಂದಿದ್ದರು. ತುಂಬಾ ಗಂಭೀರವಾಗಿದ್ದರು. ಮನಸ್ಸಿನ ಚಿಂತೆ ಮುಖದಲ್ಲಿ ಕಾಣುತ್ತಿತ್ತು. ನಾನು 'ಏನು ಪುಟ್ಟರಾಜರೇ ಆರೋಗ್ಯವೇನಾದರೂ ತುಂಬಾ ಕೆಟ್ಟಿದೆಯಾ? ಏಕೆ ಹೀಗಿದ್ದೀರಿ' ಎಂದು ಪ್ರಶ್ನಿಸುತ್ತಾ ಬಿಪಿ ಚೆಕ್ ಮಾಡತೊಡಗಿದೆ. ಬಿಪಿ ಸರಿಯಾಗಿಯೆ ಇತ್ತು. ಪುಟ್ಟರಾಜರು ತಪಾಸಣೆಗಿಂತ ಏನನ್ನೊ ಮಾತನಾಡುವುದಕ್ಕಾಗಿ ಬಂದಿದ್ದರು. ಆದರೆ ಸಂಕೋಚ ಅವರಿಗೆ ಅಡ್ಡ ಬಂದಂತೆ ಅನಿಸಿತು. ಆಮೇಲೆ ನಿಧಾನವಾಗಿ" ಸರ್! ಒಂದು ವಿಷಯ ಹೇಳಲೊ ಬಿಡಲೊ ಎಂಬ ದ್ವಂದ್ವದಲ್ಲಿದ್ದೇನೆ" ಎಂದು ಪ್ರಾರಂಭಿಸಿದರು.

ಪುಟ್ಟರಾಜು ಅವರಿಗೆ ಮುರಳಿಯ ನಂತರ ಇನ್ನೊಬ್ಬಳು ಗೀತಾ ಎಂಬ ಮಗಳು ಇದ್ದಳು. ಅವಳಾದರೂ ಶಿಸ್ತಾಗಿ ಓದಿ, ಗ್ರಾಜುಯೇಷನ್ ಮುಗಿಸಿ, ಕೋ ಆಪರೇಟಿವ್ ಬ್ಯಾಂಕಿನಲ್ಲಿ ಕೆಲಸಕ್ಕೆ ಸೇರಿದ್ದಳು. ಒಂದು ದಿನ ಗೀತಾ ಕೆಲಸಕ್ಕೆ ಹೊರಡುವ ಧಾವಂತದಲ್ಲಿ ಇದ್ದಳು. ಅದೇ ಸಮಯಕ್ಕೆ ಮನೆಯ ಕಾಂಪೌಂಡ್ ಹತ್ತಿರ ಮುರಳಿ ನಾಲ್ಕಾರು ಸ್ನೇಹಿತರೊಂದಿಗೆ ಮಾತನಾಡುತ್ತಿದ್ದ. ಅವರ ಮಾತುಗಳಲ್ಲಿ ಇವಳಿಗೂ ಏನೋ ಕುತೂಹಲ ಹುಟ್ಟಿತು. ಆ ಕಡೆ ಕಿವಿಗೊಟ್ಟಳು. ಅವರಲ್ಲೊಬ್ಬ "ಕುಳ್ಳ! ನೋಡ್ರಪ್ಪ! ಒಂದು ವಿಷಯ ಗೊತ್ತಾ? ತಂದೆ ಸರ್ಕಾರಿ ನೌಕರಿಯಲ್ಲಿ ಇರುವಾಗಲೇ ತೀರಿಕೊಂಡರೆ, ಅವರ ಮಗನಿಗೆ ಆ ಕೆಲಸ ಸಿಗುತ್ತದೆ. ಓದು ಕಡಿಮೆ ಇದ್ದರೆ ಜವಾನನ ಕೆಲಸವಾದರೂ ಕೊಡುತ್ತಾರಂತೆ" ಎಂದು ಹೇಳಿದ. ಇದನ್ನು ಕೇಳಿದ ಮುರಳಿ, "ಒಂದು ವೇಳೆ ತಂದೆ ಸಾಯದಿದ್ದರೆ?" ಎಂದು ಪ್ರಶ್ನಿಸಿದ. ಆಗ ಇನ್ನೊಬ್ಬ "ಅದಕ್ಕೆ ಏನಾದರೂ ಉಪಾಯ ಮಾಡಿದರಾಯಿತು!!" ಎಂದನಂತೆ.

ಗೀತಾಳ ಮನಸ್ಸಿನಲ್ಲಿ ಗುಣಾಕಾರ ಭಾಗಾಕಾರಗಳು ನಡೆದು ಉತ್ತರ ಸಿದ್ಧವಾಯಿತು. ಅವರಾದರೂ ಯಾರ ತಂದೆಯ ಬಗ್ಗೆ ಮಾತನಾಡಿದರೊ ತಿಳಿಯದು. ಯಾರ ಬಗೆಗಾದರೂ ಅದು ಅಪಾಯಕಾರಿ ಮಾತೆ ಆಗಿತ್ತು. ಆ ಹುಡುಗರ ವರ್ತನೆ, ವಯಸ್ಸು ಎರಡೂ ಈ ಮಾತಿನಿಂದ ಗಂಭೀರ ಚಿಂತೆಯನ್ನು ಉಂಟುಮಾಡುವಂತಿತ್ತು. ಹಾಗೆ ಈ ಮಾತನ್ನು ಕೇಳಿಸಿಕೊಂಡ

ಗೀತಾಳಿಗೆ ಗಾಬರಿಯಾಗುವುದು ಸಹಜವೆ. "ಇನ್ನೆರಡು ವರ್ಷ ಸರ್ವಿಸ್ ಇರುವ ತಂದೆಗೆ ಏನಾದರೂ ಆಪತ್ತು ಕಾದಿದೆ" ಎಂಬ ನಿರ್ಣಯವು ಅವಳಿಗೆ ಬಂತು. ಗೀತಾ ಸೂಕ್ತ ಸಂದರ್ಭವನ್ನು ನೋಡಿ ಈ ವಿಚಾರವನ್ನು ತಂದೆಯ ಕಿವಿಗೆ ಹಾಕಿದಳು.

ಇಷ್ಟು ವರ್ಷ ಸಾಕಿ ಬೆಳೆಸಿದ್ದು ಮಗನೆಂಬ ಮೃತ್ಯುವನ್ನು ಎಂದು ತಂದೆಗೆ ತಿಳಿದರೆ, ಆತ ಜೀವಂತ ಶವವಲ್ಲದೆ ಮತ್ತೇನಾಗಿರಲು ಸಾಧ್ಯ! ಹಾವು ಹೊಕ್ಕ ಮನೆಯಂತೆ ಕುಳಿತಲ್ಲಿ ನಿಂತಲ್ಲಿ ಸಾವಿನ ಭಯವೇ ಪ್ರತಿಧ್ವನಿಸುತ್ತಿತ್ತು. ಮನೆಯಲ್ಲಿ ಓಡಾಡುವ ಮಗ ಸಾವಿಗಿಂತಲೂ ಭೀಕರವಾದ ಹಿಂಸೆಯಾಗಿ ಕಾಣತೊಡಗಿದ್ದ. ಇಂತಹ ಸೂಕ್ಷ್ಮ ವಿಚಾರವನ್ನು ಯಾರಲ್ಲಿ ಹೇಳಿಕೊಳ್ಳುವುದು? ಪರಿಹಾರವಾದರೂ ಏನು? ಪುಟ್ಟರಾಜರಿಗೆ ಹೇಳಿಕೊಳ್ಳುವುದಕ್ಕಿರುವ ಏಕೈಕ ಸ್ಥಳವೆಂಬಂತೆ ನನ್ನಲ್ಲಿ ಬಂದಿದ್ದರು. ನಾನಾದರೂ ಬೇರೆ ಯಾವ ಸಲಹೆಯನ್ನು ಕೊಡಲು ಸಾಧ್ಯ? ತನ್ನ ಬೆರಳೆ ತನ್ನ ಕಣ್ಣನ್ನು ಕುಕ್ಕಿದರೆ ಯಾರನ್ನು ಆಕ್ಷೇಪಿಸುವುದು? "ಮುರಳಿ ಇಷ್ಟೆಲ್ಲ ನೀಚ ಯೋಚನೆ ಮಾಡಿರಲಿಕ್ಕಿಲ್ಲ" ಎಂಬ ಸಾಂತ್ವನದ ಮಾತೊಂದನ್ನು ಪುಟ್ಟರಾಜುವಿಗೆ ಹೇಳಿದೆ. ನನಗಾವ ಸಂಬಂಧವಿಲ್ಲದ ಘಟನೆಯೊಂದರಲ್ಲಿ ಅಸಹಾಯಕ ಮೂಕತನ ನನ್ನನ್ನು ಕಾಡಿತ್ತು.

ಕೋ-ಆಪರೇಟಿವ್ ಬ್ಯಾಂಕಿನಲ್ಲಿ ಉದ್ಯೋಗಿಯಾಗಿರುವ ಹುಡುಗ-ನೊಬ್ಬನನ್ನು ಹುಡುಕಿ, ಪುಟ್ಟರಾಜರು ಗೀತಾಳಿಗೆ ಮದುವೆಯನ್ನು ಮಾಡಿದರು. ಮಗಳ ಮದುವೆಯಾದ ಮೇಲೆ ಈ ಮೊದಲಿನ ಭಯ ಇನ್ನೂ ಹೆಚ್ಚಾಯಿತು. ಹಾಗೆ ಹೆಚ್ಚಾಗುವುದು ಸಹಜವೆ. ಅದರಿಂದ ಒಂದು ಯೋಚನೆಯನ್ನು ಮಾಡಿಕೊಂಡು ಪುಟ್ಟರಾಜರು ನನ್ನ ಕ್ಲಿನಿಕ್‌ಗೆ ಬಂದಿದ್ದರು. ಮುರಳಿ ಸ್ನೇಹಿತರೊಂದಿಗೆ ಒಂದು ವಾರಗಳ ಕಾಲ ಧರ್ಮಸ್ಥಳದ ಕಡೆಗೆ ಪ್ರವಾಸ ಹೊರಟಿದ್ದ. ಇದೇ ಸಮಯದಲ್ಲಿ ಮನೆಯನ್ನು ಬದಲಿಸಿ, ಮೊಬೈಲ್ ನಂಬರನ್ನು ಬದಲಿಸಿಕೊಂಡು, ಅವನಿಗೆ ತಿಳಿಯದಂತೆ ಉಳಿದರಾಯಿತು. ಇನ್ನು ಒಂದುವರೆ ವರ್ಷಕ್ಕೆ ನಿವೃತ್ತಿಯಾಗುತ್ತದೆ. ಆಮೇಲೆ ಮುಂದಿನ ಯೋಚನೆಯನ್ನು ಮಾಡಿದರಾಯಿತು ಎಂದುಕೊಂಡಿದ್ದರು.

ಮನೆ ಬದಲಿಸಿದರು ಆಫೀಸ್ ಅದೇ ಇರುವುದರಿಂದ ಮುರಳಿಗೆ ಇವರನ್ನು ಹುಡುಕುವುದು ಕಷ್ಟವೇನಾಗಿರಲಿಲ್ಲ. ಆದರೆ ಅವರ ಒದ್ದಾಟವನ್ನು ನೋಡಿ, ಹೇಗಾದರೂ ಮುರಳಿಗೆ ಗೊತ್ತಾಗದೆ, ಇನ್ನೂ ಒಂದುವರೆ ವರ್ಷ ಕಳೆದರೆ ಕಳೆದು ಹೋಗಲಿ ಎಂದು ನನಗೆ ಅನಿಸಿತು. ಅದರಿಂದ ಅವರ ಆಲೋಚನೆಗೊಂದು ಪ್ರೋತ್ಸಾಹದ ಮಾತನ್ನಾಡಿ ಕಳುಹಿಸಿದೆ. ಹೀಗೆ ಪುಟ್ಟರಾಜರ ಭೇಟಿ ನಿಂತಿತ್ತು.

ಹೀಗೆ ಕೆಲವು ಕಾಲ ಕಳೆದ ಮೇಲೆ ಪುಟ್ಟರಾಜರ ಮಗಳು ಗೀತಾ ಜ್ವರದ ತಪಾಸಣೆಗಾಗಿ ಕ್ಲಿನಿಕ್ಕಿಗೆ ಬಂದಿದ್ದಳು. ಏನಮ್ಮ ನಿಮ್ಮ ತಂದೆ ಚೆನ್ನಾಗಿದ್ದಾರಾ?

ಎಂದು ವಿಚಾರಿಸಿದೆ. ಅದಕ್ಕೆ ಉತ್ತರವಾಗಿ, ನಮ್ಮಣ್ಣ ಜೈಲಿಗೆ ಹೋದದ್ದು ನಿಮಗೆ ತಿಳಿದಿಲ್ಲವೆ? ಎಂದು ಗೀತಾ ಪ್ರಶ್ನಿಸಿದಳು. ನನಗೆ 'ಕೊನೆಗೂ ಮುರಳಿ ಇಂತಹ ಹೇಯ ಕೃತ್ಯವನ್ನು ಮಾಡಿದನಲ್ಲಾ' ಎಂದು ಬಹಳ ವಿಷಾದವಾಯಿತು. ಈ ಹಿಂದಿನ ವಿವರಗಳೆಲ್ಲ ಪುಟ್ಟರಾಜರು ನನಗೆ ಹೇಳಿದ್ದಾರೆಂಬ ವಿಷಯ ಗೀತಾಳಿಗೆ ಗೊತ್ತಿದೆಯೊ? ಇಲ್ಲವೊ? ತಿಳಿಯದು. ಹಾಗಾಗಿ ಬೇರೆ ಏನನ್ನು ಕೇಳುವುದಕ್ಕೂ ಆಸ್ಪದ ಇರಲಿಲ್ಲ. ಅಷ್ಟರಲ್ಲಿ ಗೀತಾ "ನಮ್ಮ ತಂದೆ ಚೆನ್ನಾಗಿದ್ದಾರೆ" ಎಂದಳು. ನಾನು ಸಮಾಧಾನದ ನಿಟ್ಟುಸಿರನ್ನು ಬಿಟ್ಟು, ಮುರಳಿ ಜೈಲಿಗೆ ಹೋದ ಬಗ್ಗೆ ಕುತೂಹಲವನ್ನು ತೋರಿದೆ! ಮುರಳಿ ಆತನ ದುಷ್ಟ ಸ್ನೇಹಿತರನ್ನು ಸೇರಿ, ಸಮಾಜಘಾತಕ ಕೃತ್ಯ ಒಂದರಲ್ಲಿ ಭಾಗಿಯಾಗಿದ್ದಾನೆಂಬ ಕೇಸಿನಲ್ಲಿ ಜೈಲಿಗೆ ಹೋಗಿದ್ದ. "ಬರುವ ವಾರ ತಂದೆಗೆ ನಿವೃತ್ತಿಯಾಗುತ್ತದೆ" ಎಂದು ಮುಂದುವರಿದು ಹೇಳಿದಳು. ಪುಟ್ಟರಾಜರ ಮರಣ ಭಯವೊಂದು ಹೀಗೆ ಕಳೆದುಹೋಗಿತ್ತು.

ಕಾಲಕ್ಕೆ ಭಯವನ್ನು ಹುಟ್ಟಿಸುವುದು ಗೊತ್ತು, ನಿವಾರಿಸುವುದು ಗೊತ್ತು. ಧರ್ಮಸ್ಥಳಕ್ಕೆ ಹೋಗಬೇಕಾದ ಮುರಳಿಯನ್ನು ಕಾರಾಗೃಹಕ್ಕೆ ಕಳಿಸಿತ್ತು. ನಿರ್ಭಯವಾದ ಸ್ಥಳವನ್ನು ಹುಡುಕುತ್ತಿದ್ದ ಪುಟ್ಟರಾಜರಿಗೆ ಅಲ್ಲೇ ಅಭಯವನ್ನು ನೀಡಿತ್ತು. ಸಂತೋಷವಿಲ್ಲದ ಸಮಾಧಾನವನ್ನು ಕೆಲಸದ ನಿವೃತ್ತಿ ಕೊಟ್ಟಿತ್ತು.

# ನಿವೃತ್ತಿ ವೇತನ

ಹಲವು ರೋಗಿಗಳ ಹೃದಯ ಬಡಿತವನ್ನು ಪರೀಕ್ಷಿಸುವಾಗಲೇ ಅವರ ಆರ್ಥಿಕ ಸ್ಥಿತಿಯು ತಿಳಿಯುತ್ತಿತ್ತು. ನಾನು ವೈದ್ಯ ವೃತ್ತಿಯನ್ನು ಪ್ರಾರಂಭಿಸಿದ ದಿನಗಳಲ್ಲಿ ನನ್ನ ಸ್ಥಿತಿಯು ಹೀಗೆ ಇತ್ತು. ಹಾಗಾಗಿ ರೋಗಿಗಳೊಂದಿಗೆ ಸಮಾನ ಪರಿಸ್ಥಿತಿಯ ಬಂಧುತ್ವ ಏರ್ಪಡುತ್ತಿತ್ತು. ಹಲವು ರೋಗಿಗಳಿಗೆ ಡಾಕ್ಟರರ ಬಿಲ್ಲನ್ನು ಕೊಟ್ಟರೆ ಔಷಧಿಗೆ ದುಡ್ಡಿಲ್ಲ, ಔಷಧಿಯನ್ನು ಕೊಂಡರೆ ಹೊಟ್ಟೆಗೆ ಹಿಟ್ಟಿಲ್ಲ ಎಂಬ ಸ್ಥಿತಿಯೇ ಸಾಮಾನ್ಯವಾಗಿತ್ತು. ಒಂದು ರೂಪಾಯಿ ಫೀಸಿನಿಂದ ನನ್ನ ವೃತ್ತಿಯನ್ನು ಆರಂಭಿಸಿದ್ದೆ. ವೃತ್ತಿಯಲ್ಲಿ ಅನುಕಂಪವೇ ಮುಂದಾಗಿ ಆ ಒಂದು ರೂಪಾಯಿಯೂ ನನ್ನ ಜೋಬಿಗೆ ಬರುವುದು ಕಷ್ಟವಾಗಿತ್ತು. ಆದರೆ ಅನೇಕ ರೋಗಿಗಳ ಋಣ ಪ್ರಜ್ಞೆ, ನನ್ನ ಜೋಬಿಗಿಂತ ಹೆಚ್ಚಾಗಿ ಮನಸ್ಸನ್ನು ತುಂಬಿಸಿದೆ. ಅದು ದುಡ್ಡಿಗಿಂತ ಹೆಚ್ಚು ಆನಂದವನ್ನು ಕೊಟ್ಟಿದೆ.

ಹೊರದೇಶದ ಹಾಗೆ ನಮ್ಮ ದೇಶದ ಚಿಕ್ಕ ಪುಟ್ಟ ಹಳ್ಳಿಗಳಲ್ಲೆಲ್ಲ ಸರ್ವಿಸ್ ಮಾಡಿ, ಸುಮಾರು 1980ರ ಸಮಯದಲ್ಲಿ ಬೆಂಗಳೂರಿಗೆ ಬಂದೆ. ಹಳ್ಳಿಗಳಲ್ಲಾದರೆ ನಾಲ್ಕೈದು ಹಳ್ಳಿಗಳಿಗೆ ಸೇರಿದಂತೆ ಒಂದು ಡಾಕ್ಟರ್ ಇರುವುದರಿಂದ, ರೋಗಿಗಳು ಅವರೇ ಗತಿ ಎಂದು ಬರಬೇಕಾಗುತ್ತದೆ. ಬೆಂಗಳೂರಿನಲ್ಲಿ ಅಂತಹ ಸ್ಥಿತಿ ಇರಲಿಲ್ಲ. ಹಾಗಾಗಿ ಡಾಕ್ಟರ್‌ಗಳ ಪರಿಚಯ, ಪ್ರಸಿದ್ಧಿಯಿಂದಲೇ ರೋಗಿಗಳು ಚಿಕಿತ್ಸಾಲಯಕ್ಕೆ ಬರುವುದು. ಆದ್ದರಿಂದ ನಾನು ಕಾಯುವುದು ಅನಿವಾರ್ಯವೇ ಆಗಿತ್ತು. ಇದು ನನ್ನೊಬ್ಬನ ಅನುಭವವೂ ಅಲ್ಲ. ಆ ಕಾಲದ ಬಹುತೇಕ ನನ್ನಂತ ಎಲ್ಲ ಡಾಕ್ಟರ್‌ಗಳ ಅನುಭವವೂ ಅದೇ ಆಗಿತ್ತು. ಆದುದರಿಂದ "ಮೊದಲು ಡಾಕ್ಟರ್ ಕಾಯಬೇಕು ನಂತರ ರೋಗಿಗಳು ಕಾಯುತ್ತಾರೆ" ಎಂಬ ಮಾತು ಪ್ರಚಲಿತವಾಗಿತ್ತು. ಹೀಗೆ ಮೂರು ನಾಲ್ಕು ವರ್ಷಗಳು ಕಳೆಯುವಾಗ ನನ್ನನ್ನೇ ಕಾಯುವ ಅನೇಕ ರೋಗಿಗಳ ಪಟ್ಟಿಯು ಬೆಳೆಯಿತು.

ಅಸ್ತಮಾ ಎಂಬ ಆಮರಣಾಂತ ಕಾಯಿಲೆಯನ್ನು ಹೊಂದಿದ "ಮುಜಿಬುನ್ನಿಸಾ" ಎಂಬ ಮಹಿಳೆಯೊಬ್ಬಳು ನನ್ನ ಖಾಯಂ ರೋಗಿ ಆಗಿದ್ದಳು. ತಿಂಗಳಲ್ಲಿ ಒಂದೊ, ಎರಡೊ ಬಾರಿ ಬಂದೇ ಬರುತ್ತಿದ್ದಳು. ಆಕೆಗೆ ಮೂವರು ಮಕ್ಕಳು. ಸುಮಾರು ಮೂವತ್ತೈದು ವರ್ಷದ 'ಜಾಫರ್' ಎಂಬ ಹೆಸರಿನ ದೊಡ್ಡ ಮಗ, ಬಾಡಿಗೆ ಆಟೋವನ್ನು ಓಡಿಸುತ್ತಿದ್ದ. ಆಟೋ ಮಾಲಿಕ ಮತ್ತು ಚಾಲಕರ ಒಪ್ಪಂದಗಳು ಹೇಗಿತ್ತೆಂದು ತಿಳಿಯದು. ದುಡಿಮೆಯಲ್ಲಾ ಆಟೋ ರಿಪೇರಿಗೆ ಸರಿಯಾಗುತ್ತಿತ್ತು.

ಇನ್ನೊಬ್ಬ ಮಗ ಸುಮಾರು ಮೂವತ್ತು ವರ್ಷದ 'ಸಲೀಂ' ಎಂಬವನು ಎಲೆಕ್ಟ್ರಿಕ್ ಅಂಗಡಿಯಲ್ಲಿ ಮಿಕ್ಸಿ, ಐರನ್ ಬಾಕ್ಸ್ ಮುಂತಾದ ಪರಿಕರಗಳ ರಿಪೇರಿ ಕೆಲಸವನ್ನು ಮಾಡಿಕೊಂಡಿದ್ದ. ಮಗಳಿಗೆ 27– 28 ವರ್ಷವಾಗಿತ್ತು. ಬಡತನದ ಕಾರಣದಿಂದಲೋ ಏನೊ ಅವಳಿಗಿನ್ನು ವಿವಾಹವಾಗಿರಲಿಲ್ಲ. ಮುಜಿಬುನ್ನಿಸಾ ಅಲ್ಲೋ ಇಲ್ಲೋ ದುಡಿದು ಸಂಸಾರದ ಗಾಡಿಯನ್ನು ತಳ್ಳುತ್ತಿದ್ದಳು. ಹವಾಮಾನ ವೈಪರಿತ್ಯ, ಧೂಳು ದೆಸೆಗಳಿಂದ ಅವಳ ಅಸ್ತಮಾ ಆಗಾಗ ಉಲ್ಬಣವಾಗುತ್ತಲೇ ಇರುತ್ತಿತ್ತು. ಹಾಗಾದಾಗಲೆಲ್ಲ ಬಂದು, ಇದು ಶ್ವಾಸಕೋಶದ ತೊಂದರೆಯೆ? ಅಥವಾ ಬೇರೆ ಯಾವುದಾದರೂ ಕಾಯಿಲೆಯೆ? ಇತ್ಯಾದಿ ಪ್ರಶ್ನೆಗಳನ್ನು ಮಾಡಿ ಸಮಾಧಾನವನ್ನು ಪಡೆದುಕೊಂಡು, ಕೆಲವು ಮಾತ್ರೆಗಳೊಂದಿಗೆ ಮರಳುತ್ತಿದ್ದಳು. ಪ್ರತಿ ಸಾರಿ ಹೋಗುವಾಗಲೂ ಈ ಕಾಯಿಲೆ ವಾಸಿಯಾಗುವುದೆ? ಎಂದು ಪ್ರಶ್ನಿಸುತ್ತಿದ್ದಳು. "ಸಲಾಂ ಸಾಬ್, ಆಫ್ ಕೋ ಬಹುತ್ ಧನ್ಯವಾದ್" ಎಂಬ ಕೃತಜ್ಞತೆಯ ಮಾತನ್ನು ಹೇಳಲು ಮರೆಯುತ್ತಿರಲಿಲ್ಲ.

ಇನ್ನೊಮ್ಮೆ ಹೀಗೆ ಮುಜಿಬುನ್ನಿಸಾ ಕ್ಲಿನಿಕ್ಕಿಗೆ ಬಂದಿದ್ದಳು. ಆಗ ನನ್ನ ಫೀಸು 5 ರೂಪಾಯಿ ಇತ್ತು. ಡಾಕ್ಟರ್ ಸಾಬ್ ಈ ಬಾರಿ ಎರಡು ರೂಪಾಯಿ ಕಡಿಮೆ ಇದೆ. ಇನ್ನೊಮ್ಮೆ ಬಂದಾಗ ಕೊಡುತ್ತೇನೆ. ಮಗನ ಆದಾಯ ಆಟೋ ರಿಪೇರಿಗೆ ಸರಿ ಹೋಗುತ್ತದೆ. ಹೊಸ ಆಟೋ ಕೊಳ್ಳಲು ಜಾಮೀನು ಹಾಕುವವರು ಇಲ್ಲ. ಎಂದೆಲ್ಲ ಅವಳ ಸ್ಥಿತಿಯನ್ನು ಹೇಳಿಕೊಂಡಳು. ಪಾಪ! ಕೇವಲ ಎರಡು ರೂಪಾಯಿ, ಮುಜಿಬುನ್ನಿಸಾಳ ಸ್ಥಿತಿಗತಿಗಳನ್ನು ನನ್ನ ಮುಂದೆ ಬಯಲು ಮಾಡಿತ್ತು.

ಅಲ್ಲಿಯವರೆಗೂ ಅವಳು ಹೇಳಿದ ಅವಳ ಕುಟುಂಬದ ಕಥೆಯನ್ನು ಮಾತ್ರ ಕೇಳುತ್ತಿದ್ದೆ. ಹೊರತು ಕೆದಕುತ್ತಿರಲಿಲ್ಲ. ಯಾರ ದೇಹದಲ್ಲಿ ಯಾವ ರೋಗ ಇದೆಯೊ? ಯಾರ ಬದುಕಿನಲ್ಲಿ ಯಾವ ಗಾಯ ಇದೆಯೊ? ತಿಳಿಯದು. ತಿಳಿಯುವ ಕುತೂಹಲವು ಸರಿಯಾಗದು. ಆದರೆ ಹೀಗೆ ತೆರೆದುಕೊಂಡ ಅವಳ ದೈನ್ಯದಿಂದ ನನ್ನ ಕುತೂಹಲ ಮುಗ್ಗರಿಸಿತು. ಏನಮ್ಮ, ನಿನ್ನ ಯಜಮಾನ ಏನು ಮಾಡುತ್ತಾನೆ? ಎಂದು ಕೇಳಿದೆ. ಆಗ ಹತ್ತು ವರ್ಷಗಳ ಹಿಂದೆಯೇ ತೀರಿಹೋದ ಗಂಡನ ಕಥೆಯನ್ನು ಹೇಳಿದಳು. ಯಾವುದೋ ಸರ್ಕಾರಿ ಪ್ರೆಸ್ಸಿನಲ್ಲಿ ಕೆಲಸ ಮಾಡಿಕೊಂಡಿದ್ದನಂತೆ. ತೀವ್ರವಾದ ಬಿಡಿ ಚಟದಿಂದ, ಶ್ವಾಸಕೋಶ ಸಂಬಂಧಿ ಕಾಯಿಲೆ ಬಂದು, ವಿಕ್ಟೋರಿಯಾ ಆಸ್ಪತ್ರೆಯಲ್ಲಿ ತೀರಿಕೊಂಡನಂತೆ. ಸರ್ಕಾರಿ ಸರ್ವಿಸ್ ಮುಗಿಯುವ ಮೊದಲೇ ಈ ಲೋಕದ ಸಂಬಂಧ ಆತನಿಗೆ ಮುಗಿದಿತ್ತು.

ಕೆಲವು ವರ್ಷ ಸರ್ಕಾರಿ ವ್ಯವಸ್ಥೆಯಲ್ಲಿ ಕೆಲಸ ಮಾಡಿದ್ದರಿಂದ, ಅಕಾಲಿಕವಾಗಿ ನಿಧನರಾದ ಸರಕಾರಿ ನೌಕರಿಗೆ ಸಿಗಬಹುದಾದ ಸೌಲಭ್ಯಗಳ ಕುರಿತು ಒಂದಷ್ಟು ತಿಳುವಳಿಕೆ ನನಗಿತ್ತು. ಅದರಂತೆಯೇ ಪ್ರಶ್ನಿಸಿದಾಗ ತಿಳಿಯಿತು,

ಸೇವೆಯಲ್ಲಿರುವಾಗಲೇ ತೀರಿಕೊಂಡರೆ ಆತನ ಕುಟುಂಬಕ್ಕೆ ಸಿಗಬೇಕಾದ ಒಂದು ಕೆಲಸ, ನಿವೃತ್ತಿ ವೇತನ ಇತ್ಯಾದಿ ಯಾವ ಸೌಲಭ್ಯಗಳು ಮುಜಿಬುನ್ನಿಸಾಳಿಗೆ ಸಿಕ್ಕಿರಲಿಲ್ಲ! ಅಷ್ಟೇ ಅಲ್ಲದೆ ಈ ಸೌಲಭ್ಯಗಳು ಇದೆ ಎನ್ನುವುದು ಅವಳಿಗೆ ಗೊತ್ತಿರಲಿಲ್ಲ! ಆದರೆ ಮುಜಿಬುನ್ನಿಸಾಳ ದೊಡ್ಡ ಮಗ ಕೆಲವು ಸಮಯ ಕೆಲಸಕ್ಕಾಗಿ ಪ್ರಯತ್ನಿಸಿ, ಕೆಲಸ ಸಿಗದೇ ಆಟೋ ವೃತ್ತಿಗೆ ಅಂಟಿಕೊಂಡಿದ್ದ.

ಮುಜಿಬುನ್ನಿಸಾಳ ದೈನ್ಯ ಸ್ಥಿತಿ ನನ್ನ ಮನಸ್ಸನ್ನು ಹೊಕ್ಕಿತು. ಅವಳ ಗಂಡನ ಸಹೋದ್ಯೋಗಿಗಳಾಗಲಿ, ನಿವೃತ್ತಿ ವೇತನ ಕಚೇರಿಯವರಾಗಲಿ ಇವರ ಸಹಾಯಕ್ಕೆ ನಿಲ್ಲಲಿಲ್ಲವಲ್ಲ! ಎಂದು ಬೇಸರವಾಯಿತು. ನನ್ನ ಕ್ಲಿನಿಕ್ಕಿನ ಹೊರಗಡೆ ಇಷ್ಟೊಂದು ನಿಷ್ಕರುಣೆ? ಇದೆಯೇ ಎನಿಸಿತು! ನನ್ನ ಕಾರ್ಯಾವಸರದ ನಡುವೆ ಮತ್ತೆ ಮತ್ತೆ ಇದೇ ಯೋಚನೆ ಬರತೊಡಗಿತು. ಹಾಗಾಗಿ ಅವಳಿಗೆ ಏನಾದರೊಂದು ಪರಿಹಾರವನ್ನು ಹೇಳಬೇಕೆಂಬ ತುಡಿತವು ಹೆಚ್ಚಾಯಿತು.

ಹೀಗೆ ಕೆಲವು ದಿನ ಕಳೆಯುವಾಗ ನನ್ನ ಇನ್ನೊಬ್ಬ ಖಾಯಂ ರೋಗಿಗಳಾದ ಭೀಮಪ್ಪನವರು ತಪಾಸಣೆಗಾಗಿ ನನ್ನಲ್ಲಿ ಬಂದರು. ಅವರು ಬಿ.ಎಚ್.ಇ.ಎಲ್.ನಲ್ಲಿ ಉದ್ಯೋಗಿಯಾಗಿದ್ದರು. ಅವರು ತಮ್ಮೆಲ್ಲ ಔಷಧ ರಶೀದಿಗಳಲ್ಲಿ ನನ್ನ ಸಹಿಯನ್ನು ಪಡೆಯುತ್ತಿದ್ದರು. ಯಾಕೆಂದರೆ ಸರ್ಕಾರ ಅವರಿಗೆ ವೈದ್ಯಕೀಯ ವೆಚ್ಚವನ್ನು ನೀಡುತ್ತಿತ್ತು. ಆಗಲೇ ಅವರಲ್ಲಿ ಮುಜಿಬುನ್ನಿಸಾಳ ವಿಚಾರಗಳನ್ನು ಪ್ರಸ್ತಾಪಿಸಿದೆ. ಅವರು ಸರ್ಕಾರಿ ಕೆಲಸದಲ್ಲಿದ್ದ ಬಗ್ಗೆ ಪುರಾವೆ, ಕೊನೆಯಲ್ಲಿ ಪಡೆದ ಸಂಬಳದ ವಿವರ, ಆಸ್ಪತ್ರೆಯಿಂದ ಪಡೆದ ಮರಣ ಪ್ರಮಾಣ ಪತ್ರ ಇಷ್ಟು ದಾಖಲೆಗಳಿದ್ದರೆ ಈಗಲೂ ನಿವೃತ್ತಿ ವೇತನ ಮತ್ತು ಪಿಂಚಣಿಗಾಗಿ ಪ್ರಯತ್ನಿಸಬಹುದು ಎಂದರು. ಭೀಮಪ್ಪನವರ ಮಾತಿನಿಂದ ಮುಜಿಬುನ್ನಿಸಾಳ ಬದುಕಿಗೊಂದು ಆಸರೆ ಸಿಗಬಹುದೆಂಬ ವಿಶ್ವಾಸವು ನನ್ನಲ್ಲಿ ಮೂಡಿತು. ಆದರೆ ನಾನು ಮುಜಿಬುನ್ನಿಸಾಳನ್ನು ಭೇಟಿಯಾಗಲು ಅವಳ ಕಾಯಿಲೆ ಉಲ್ಬಣವಾಗುವುದನ್ನೆ ಕಾಯಬೇಕಿತ್ತು. ಬೇರಾವ ಸಂಪರ್ಕ ವ್ಯವಸ್ಥೆಯಾಗಲಿ, ಅವರ ಮನೆಯ ಪರಿಚಯವಾಗಲಿ ನನಗೆಲ್ಲಿ ಇರುತ್ತದೆ?!

ಹಾಗೆ ಕೆಲವು ದಿನಗಳ ನಂತರ ಮುಜಿಬುನ್ನಿಸಾ ಮಗ ಜಾಫರ್‌ನೊಂದಿಗೆ ತಪಾಸಣೆಗಾಗಿ ಬಂದಿದ್ದಳು. ಆಗ ಜಾಫರ್‌ನಲ್ಲಿ ಈ ವಿಷಯವನ್ನೆಲ್ಲ ಪ್ರಸ್ತಾಪಿಸಿದೆ. ಕಲ್ಲಿನ ಮೇಲೆ ಒಗೆದ ಚಂಡಿನಂತೆ ನನ್ನ ಮಾತುಗಳು ನನ್ನ ಬಳಿಯೇ ಬಂತು. ಆ ವಿಷಯದಲ್ಲಿ ಜಾಫರ್‌ನಿಗೆ ಆಸಕ್ತಿಯೇ ಇರಲಿಲ್ಲ! 'ಇದೆಲ್ಲಾ ಮುಗಿದು ಹತ್ತು ವರ್ಷ ಆಯಿತು, ಸರಕಾರದಿಂದ ಯಾವ ಸೌಲಭ್ಯವು ಸಿಗುವಂತೆ ಕಾಣದು. ಇದರ ಬದಲು ಆಟೋ ಕೊಳ್ಳಲು ಬ್ಯಾಂಕ್ ಲೋನಿನ ಮಾಹಿತಿಯನ್ನು ಕೊಡಿ' ಎಂದು ಕೇಳಿದ. ನನ್ನ ಅನುಕಂಪದಿಂದ, ನನ್ನ ಕ್ಲಿನಿಕ್ ಉದ್ಯೋಗ ಮಾಹಿತಿ ಕೇಂದ್ರವಾಗಿ ಬದಲಾದಂತೆ ಅನಿಸಿತು. ಎಂಬತ್ತರ ದಶಕದಲ್ಲಿ ಬ್ಯಾಂಕ್ ಲೋನ್ ಪಡೆಯುವುದು ಅತ್ಯಂತ ಕಷ್ಟದಾಯಕವಾಗಿತ್ತು. ಸರಿಯಾದ ದಾಖಲೆ,

ಜಾಮೀನುಗಳಿಲ್ಲದೆ ಸಾಲವನ್ನು ಕೊಡುತ್ತಿರಲಿಲ್ಲ. ಅವುಗಳ ತೊಡಕನ್ನೆಲ್ಲಾ ಆತನಿಗೆ ತಿಳಿಯ ಹೇಳಿದೆ. ಅದರ ಬದಲು ತಂದೆಯ ನಿವೃತ್ತಿ ವೇತನದ ಬಗ್ಗೆ ಸ್ವಲ್ಪ ಗಮನ ಹರಿಸುವಂತೆ ಹೇಳಿದೆ. ನಿನ್ನ ತಂದೆಯ ಸಹೋದ್ಯೋಗಿಗಳು ಯಾರಾದರೂ ಇದ್ದರೆ, ಅವರನ್ನು ವಿಚಾರಿಸು, ಅಥವಾ ನನ್ನಲ್ಲಿಗೆ ಕರೆದುಕೊಂಡು ಬಾ ಎಂದೆಲ್ಲ ಹೇಳಿದೆ. ಡಾಕ್ಟರ್ ಮಾತನ್ನು ಮೀರಲಾರದೆ ಪ್ರಯತ್ನಿಸುತ್ತೇನೆ ಎಂದು ಜಾರಿಕೊಂಡ.

ತಲೆಮಾರಿನ ಅಂತರವೇ ಹೀಗಿರಬಹುದು! ಜಾಫರನಿಗೆ ದುಡ್ಡಿಲ್ಲದಿದ್ದರೂ ಸಕಾಲಕ್ಕೆ ನನ್ನಿಂದ ಚಿಕಿತ್ಸೆ ಸಿಕ್ಕರೆ ಸಾಕಿತ್ತು. ಆದರೆ ಅವನ ತಾಯಿಗೆ ನನ್ನ ಮಾತು ಭರವಸೆಯಾಗಿತ್ತು. ನನ್ನ ತಪಾಸಣೆ ವಿಶ್ವಾಸವಾಗಿತ್ತು. ಮನೆಯಲ್ಲಿ ಕುಳಿತಲ್ಲಿ ನಿಂತಲ್ಲಿ ಮುಜಿಬುನ್ನಿಸಾ ಈ ವಿಚಾರವನ್ನು ಪ್ರಸ್ತಾಪಿಸತೊಡಗಿದಳು. ಈ ಕಾಟವನ್ನು ಸಹಿಸಲಾಗದೆ ಜಾಫರ್ ಈ ವಿಷಯದಲ್ಲಿ ಪ್ರವೃತ್ತನಾದ.

ಇನ್ನೊಂದು ಹದಿನೈದು, ಇಪ್ಪತ್ತು ದಿವಸಗಳ ನಂತರ, ನನ್ನ ಕ್ಲಿನಿಕ್ಕಿನ ರೋಗಿಗಳ ಸಾಲಿನಲ್ಲಿ ಜಾಫರ್ ನಿಂತಿದ್ದ. ಎಲ್ಲ ರೋಗಿಗಳ ತಪಾಸಣೆಯ ನಂತರ, 'ಸಾಬ್ ಇವರು ನನ್ನ ತಂದೆಯ ಸಹೋದ್ಯೋಗಿಗಳು' "ಇಸ್ಮಾಯಿಲ್" ಎಂದು ಇವರ ಹೆಸರು. ಹೇಗೋ ಕಷ್ಟಪಟ್ಟು ಇವರನ್ನು ಭೇಟಿಯಾಗಿ ಕರೆತಂದೆ' ಎಂದು ಪರಿಚಯಿಸಿದ. ಇಸ್ಮಾಯಿಲ್ಲನಾದರೋ ಭೀಮಪ್ಪನವರು ಹೇಳಿದ ಎಲ್ಲಾ ದಾಖಲೆಗಳು ಬೇಕಾಗುತ್ತದೆ. ನಾನು ಕೆಲಸ ಮಾಡಿದ ಆಫೀಸ್ ಆದಕಾರಣ, ನಾನೇ ಇದನ್ನೆಲ್ಲಾ ಹೊಂದಿಸಿಕೊಡುತ್ತೇನೆ. ಇದಕ್ಕೆಲ್ಲ ಸ್ವಲ್ಪ ಹಣವು ಖರ್ಚಾಗುತ್ತದೆ. ಸದ್ಯ ನಾನೇ ಕೊಟ್ಟಿರುತ್ತೇನೆ. ಆಮೇಲೆ ನೀವು ಕೊಟ್ಟರಾಯಿತು ಜಾಪರ್ ಬೇಟಾ' ಎಂದ. ನಾನು ಜಾಪರನಿಗೆ ಸರ್ಕಾರಿ ಆಸ್ಪತ್ರೆಯಿಂದ ಮರಣ ಪ್ರಮಾಣ ಪತ್ರವನ್ನು ಪಡೆಯಲು ಹೇಳಿದೆ.

ಜಾಫರ್ ತಂದೆ ನೂರ್ ಅಹಮದ್ ಪ್ರೆಸ್ಸಿನಲ್ಲಿ ಕೆಲಸ ಮಾಡಿದ ಕೊನೆಯ ದಿನಾಂಕಕ್ಕಿಂತ ಮೊದಲಿನ ದಿನಾಂಕದಲ್ಲಿ ಡೆತ್ ಸರ್ಟಿಫಿಕೇಟ್ ಇದ್ದರೆ ಮುಂದಿನ ಕೆಲಸಕ್ಕೆ ಬಹುದೊಡ್ಡ ವಿಘ್ನ ಬಂದಂತೆ. ಸರಕಾರಿ ಕಚೇರಿಗಳಲ್ಲಿ ಇಂತಹ ಪ್ರಮಾದಗಳು ಸಹಜವಾಗಿ, ಯಾವ ಶಂಕೆ ಇಲ್ಲದೆ ನಡೆಯುತ್ತದೆ. ಅವುಗಳ ಆವಶ್ಯಕತೆ ನಮಗೆ ಬಿದ್ದಾಗ ಮಾತ್ರ, ಪರ್ವತ ತಲೆಯ ಮೇಲೆ ಬಿದ್ದಂತೆ ಆ ಕಛೇರಿಯವರು ವರ್ತಿಸುವುದು ಹೊಸದೇನೂ ಅಲ್ಲ. ತಕ್ಷಣಕ್ಕೆ ಜಾಫರನಿಗೆ ಈ ಎಚ್ಚರವನ್ನು ನೀಡಿ, ಪ್ರೆಸ್ಸಿನಲ್ಲಿ ಕೆಲಸ ಮಾಡಿದ ಕೊನೆ ದಿನಾಂಕವನ್ನು ಗಮನಿಸಿ, ಮರಣ ಪ್ರಮಾಣ ಪತ್ರವನ್ನು ತರಲು ಹೇಳಿದೆ. ಆತನಿಗೂ ಸಹಜವಾಗಿಯೇ ಈ ಯಾವ ದಿನಾಂಕಗಳು ತಿಳಿದಿರಲಿಲ್ಲ. ಅವನ ತಂಗಿಯ ಸಹಾಯದಿಂದ ಈ ದಿನಾಂಕಗಳನ್ನೆಲ್ಲ ನಮೂದಿಸಿಕೊಂಡ.

ಹೀಗೆ ಮತ್ತೆ ಕೆಲವು ದಿವಸಗಳ ನಂತರ ಮುಜಿಬುನ್ನಿಸಾ ತಪಾಸಣೆಗೆಂದು ಬಂದಳು. ಆಗ "ಉಸ್ ಆಸ್ಪತಾಲ್ ಮೇ ಸರ್ಟಿಫಿಕೇಟ್ ದೇನೆ ಕೇಲಿಯೇ

ದೋ ಸೌ ಪೂಛತೆ ಸಾಬ್" ಎಂದು ದುಃಖದಿಂದ ಹೇಳಿದಳು. ಆ ಇನ್ನೂರು ರೂಪಾಯಿಗಳನ್ನು ಹೊಂದಿಸುವ ಶಕ್ತಿಯು ಅವಳಿಗೆ ಇರಲಿಲ್ಲ. ಹೆಣ ಸುಡುವುದಕ್ಕೂ ಲಂಚ ಕೊಡಬೇಕಾದ ಕಾಲದಲ್ಲಿ, ಮರಣ ಪ್ರಮಾಣ ಪತ್ರಕ್ಕೆ ಲಂಚ ಕೊಡಬೇಕಾದದ್ದು ವಿಶೇಷವೂ ಅಲ್ಲ. ಕಾಲದ ಅನಿವಾರ್ಯತೆಯನ್ನು ಅವಳಿಗೆ ತಿಳಿಯ ಹೇಳಿದೆ ಲಂಚ ಕೊಟ್ಟರೆ ಮಾತ್ರ ಸರ್ಟಿಫಿಕೇಟ್ ಸಿಗುವುದೇ ವಿನಾ ಬೇರೆ ದಾರಿ ಇಲ್ಲ ಎಂಬುದನ್ನು ಹೇಳಿದೆ. ಈ ಸತ್ಯವನ್ನು ಮುಜಿಬುನ್ನಿಸಾ ಒಪ್ಪಿಕೊಂಡ ಮಾತ್ರಕ್ಕೆ ಹಣ ಒದಗಬೇಕಲ್ಲ!

ಜಾಫರನಿಗೆ ಹಣ ಸಿಗುವ ಬಗ್ಗೆ ಸ್ವಲ್ಪ ಭರವಸೆ ಬಂದು, ಇನ್ನೂರು ರೂಪಾಯಿಗಳನ್ನು ಹೇಗೋ ಸಂಗ್ರಹಿಸಿ ಸರ್ಟಿಫಿಕೇಟನ್ನು ಪಡೆದಿದ್ದ.

ಉಳಿದ ದಾಖಲಾತಿಗಳನ್ನು ಇಸ್ಮಾಯಿಲ್ ಹೊಂದಿಸಿಕೊಟ್ಟಿದ್ದ. ಇಷ್ಟಾದ ಮೇಲೆ ಇನ್ನೊಂದು ಸಂಶಯವು ಎದುರಾಯಿತು. ನೂರ್ ಅಹಮದ್ ಈ ಮೊದಲು ಒಂದು ಮದುವೆಯಾಗಿ ತಲಾಖ್ ಕೊಟ್ಟಿದ್ದ. ಅವರೇನಾದರೂ ಈ ಪ್ರಕ್ರಿಯೆಯನ್ನು ಮುಂದುವರಿಸಿ, ಹಣವನ್ನು ಪಡೆದಿದ್ದರೆ? ಅಥವಾ ಪಿಂಚಣಿಗಾಗಿ ಅವಳ ಹೆಸರನ್ನು ಸೇರಿಸಿದರೆ? ಅವಳು ಈಗಾಗಲೇ ಪಿಂಚಣಿಯನ್ನು ಪಡೆಯುತ್ತಿದ್ದರೆ? ಈ ಎಲ್ಲಾ ಸಂಶಯಗಳನ್ನು ನಿವಾರಿಸಿಕೊಳ್ಳುವುದಕ್ಕೆ ದಾಖಲೆಯನ್ನೇ ಪರೀಕ್ಷಿಸಿದ್ದಾಯಿತು. ಆದರೆ ಹಾಗೇನು ಆಗಿರಲಿಲ್ಲ.

ಮತ್ತೆ ಎರಡು ಮೂರು ತಿಂಗಳ ಕಾಲ ಈ ವಿಷಯ ನಿದ್ರಾವಸ್ಥೆಗೆ ಸಂದಿತು. ನಾನು ನನ್ನ ದಿನಚರಿಯಲ್ಲಿ ಮುಳುಗಿದೆ. ಇದಕ್ಕಿಂತಲೂ ಮುಂದುವರಿದ ಭಾಗಗಳೆಲ್ಲ ಮುಜಿಬುನ್ನಿಸಾ ತಪಾಸಣೆಗೆಂದು ಬಂದಾಗಲೇ ನನಗೆ ತಿಳಿಯಬೇಕಾಗಿತ್ತು. ಕಾಯಿಲೆ ಹೆಚ್ಚಾದಾಗಲೇ ಅವಳು ಬರುವುದಾಗುತ್ತಿತ್ತು. ಹಾಗೆ ಬಂದಾಗ ಸರಕಾರಿ ಕಚೇರಿಯ ಇನ್ನೊಂದು ಮುಖದ ಅನಾವರಣವು ನನಗಾಯಿತು. ಪಿಂಚಣಿ ಕಚೇರಿಯ ಗುಮಾಸ್ತನೊಬ್ಬ "ಇಷ್ಟು ವರ್ಷ ಏಕೆ ವಿಚಾರಿಸಲಿಲ್ಲ" ಎಂದು ಷರಾ ಬರೆದು ಕಡತವನ್ನು ನಿಲ್ಲಿಸಿದ್ದನಂತೆ. ಈ ಸರಕಾರಿ ಕಚೇರಿಗಳಲ್ಲಿ ಕೆಲಸ ಮಾಡುವುದಕ್ಕೆ ಕಾನೂನುಗಳಿಲ್ಲ! ಕೆಲಸ ಮಾಡದಿರುವುದಕ್ಕೆ, ಆಗದಿರುವುದಕ್ಕೆ ಮಾತ್ರ ಕಾನೂನುಗಳಿವೆ. ಮುಂದೆ ಅದೇ ಗುಮಾಸ್ತ ಲಂಚವನ್ನು ಪಡೆದು "ಮುಜಿಬುನ್ನಿಸಾ ಅನಕ್ಷರಸ್ಥಳು ಆದ್ದರಿಂದ ಆಕೆಗೆ ಏನು ತಿಳಿದಿರಲಿಲ್ಲ" ಎಂಬ ಅಫಿಡವಿಟ್‌ನೊಂದಿಗೆ, ಈ ಕಾನೂನಿನ ಪ್ರಕ್ರಿಯೆಯನ್ನು ಮುಗಿಸಿದನಂತೆ. ಇನ್ನು ಒಂದೆರಡು ತಿಂಗಳಲ್ಲಿ ಫಲ ಸಿಗಬಹುದೆಂದು ಆಶಾಭಾವವನ್ನು ತೋರಿದಳು.

ಇದಾಗಿ ಒಂದುವರೆ ತಿಂಗಳು ಕಳೆದಿರಬಹುದು. ಒಂದು ದಿನ ಮುಜಿಬುನ್ನಿಸಾ ತನ್ನ ಮಗಳೊಂದಿಗೆ, ಕೈಯಲ್ಲೊಂದು ಪುಟ್ಟ ನೀರಿನ ಡ್ರಮ್ ಹಿಡಿದು ನನ್ನ ಕ್ಲಿನಿಕ್ಕಿನ ಸರದಿಯಲ್ಲಿ ಕಾಯುತ್ತಿದ್ದಳು. ಹಾಗೆ ಕ್ಲಿನಿಕ್ಕಿನ ಒಳಗೆ ಬಂದವಳೇ ಡಾಕ್ಟರ್ ಸಾಬ್ ಆಫ್ ಕೋ ಬಹುತ್ ಬಹುತ್ ಧನ್ಯವಾದ್ ಎಂದು ಕೈಜೋಡಿಸಿ ನಮಸ್ಕರಿಸುತ್ತಿದ್ದಳು. ಕಣ್ಣು ತೇವವಾಗಿತ್ತು. ಇದರಿಂದಲೇ

ಮುಜಿಬುನ್ನಿಸಾಗೆ ಪಿಂಚಣಿ ವ್ಯವಸ್ಥೆ ಆಯಿತೆಂದು ಊಹಿಸಿದೆ. ಅದರಂತೆ ನಾಲ್ಕು ದಿನಗಳ ಹಿಂದೆ ಆಕೆಗೆ ಕುಟುಂಬ ನಿವೃತ್ತಿ ವೇತನ ಮಂಜೂರಾಗಿತ್ತು. ಅದು ಹಿಂದಿನ ಬಾಕಿಯೆಲ್ಲ ಸೇರಿಸಿ ಇಪ್ಪತ್ತೆರಡು ಸಾವಿರ ರೂಪಾಯಿಗಳ ಮೊತ್ತ ಆಗಿತ್ತು. ಎರಡು ರೂಪಾಯಿ ಮುಂದಿನ ಸಾರಿ ಕೊಡುತ್ತೇನೆ ಎನ್ನುವವಳಿಗೆ, ಇಪ್ಪತ್ತೆರಡು ಸಾವಿರ ಎಷ್ಟು ಸಂತೋಷವನ್ನು ಕೊಟ್ಟಿರಬಹುದು!! ತಮ್ಮ ಊಹೆಗೆ ಬಿಟ್ಟಿದ್ದು! ಆದರೆ ಈ ಇಪ್ಪತ್ತೆರಡು ಸಾವಿರದ ಸಂತೋಷ ಅವಳಿಗೆ ತೀರಾ ಕ್ಷಣಿಕವಾಗಿತ್ತು.

ಈ ಸಂತೋಷದಲ್ಲಿ ಮುಜಿಬುನ್ನಿಸಾ ಬ್ಯಾಂಕಿಗೆ ಹೋಗಿ ಅಕೌಂಟನ್ನು ನೋಡುತ್ತಾಳೆ, ಅವಳ ಖಾತೆಯಲ್ಲಿ ಕೇವಲ ಒಂದು ಸಾವಿರ ಚಿಲ್ಲರೆ ಹಣ ಇತ್ತು. ಇದು ಹೇಗೆಂದು ವಿಚಾರಿಸಿದಾಗ ತಿಳಿಯಿತು! ನೂರ್ ಅಹಮದ್ ಸರಕಾರಿ ಕೆಲಸದಲ್ಲಿದ್ದ ಬಗ್ಗೆ ಪುರಾವೆ, ಕೊನೆಯಲ್ಲಿ ಪಡೆದ ಸಂಬಳದ ದಾಖಲೆಯನ್ನು ಪಡೆಯಲು, ಇಸ್ಮಾಯಿಲ್ 10,000 ರೂಪಾಯಿಗಳನ್ನು ಕೊಟ್ಟಿದ್ದೇನೆಂದು, ಆ ಮೊತ್ತದ ಚಕ್ಕನ್ನು ಪಡೆದಿದ್ದ. ಹಾಗೆ ಮುಜಿಬುನ್ನಿಸಾಳ ದೊಡ್ಡ ಮಗ ಆಟೋ ಕೊಳ್ಳಲು ಡೌನ್ ಪೇಮೆಂಟ್‌ಗೆ ಎಂದು 11000 ರೂಪಾಯಿಗಳ ಚೆಕ್ಕಿಗೆ ಹೆಬ್ಬೆಟ್ಟನ್ನು ಒತ್ತಿಸಿಕೊಂಡಿದ್ದ. ಮುಜಿಬುನ್ನಿಸಾಳು ಹಣ ಬಂದ ಸಂತೋಷದಲ್ಲಿ ಚೆಕ್ಕಿನಲ್ಲಿ ಯಾವ ಮೊತ್ತವನ್ನು ಬರೆದರೆಂದು ನೋಡದೆ, ಹೆಬ್ಬೆಟ್ಟನ್ನು ಒತ್ತಿದ್ದಳು. ಉಳಿದ ಹಣದಲ್ಲಿ ಸುಮಾರು 150 ರಿಂದ 200 ರೂಪಾಯಿಯ ಬೆಲೆಯ ಒಂದು ನೀರಿನ ಡ್ರಮ್ ಕೊಂಡು, ನನಗೆ ಕೃತಜ್ಞತೆ ಹೇಳಲು ಬಂದಿದ್ದಳು. ನನಗೆ ಏನೂ ಬೇಡ ಎಂದರೂ, ಕಣ್ಣೀರಿಟ್ಟು ನನ್ನನ್ನು ಮಣಿಸಿದಳು. ಕೆಲವು ಸಮಯದ ನಂತರ ಬೇರೆಡೆ ಎಲ್ಲೋ ಮನೆ ಮಾಡಿಕೊಂಡು ಮುಜಿಬುನ್ನಿಸಾ ಹೋದಳು. ಪ್ರತಿ ತಿಂಗಳು ಬರುವ ಸುಮಾರು 250 ರೂಪಾಯಿಗಳಷ್ಟು ಪಿಂಚಣಿ, ಮುಜಿಬುನ್ನಿಸಾಳ ಅಷ್ಟೋ ಇಷ್ಟೋ ಕಷ್ಟವನ್ನು ನಿವಾರಿಸಿರಬಹುದೆಂಬ ಸಮಾಧಾನ ನನ್ನದು.

ಹೀಗೆ ಕೃತಜ್ಞತೆಯ ಕಾಣಿಕೆಯಾಗಿ ಬಂದ ಡ್ರಮ್ಮಿನ ಮೇಲೆ ನನ್ನ ಮನೆಯವಳಿಗೆ ಅತೀವವಾದ ಆದರ. "ನಿಮ್ಮ ಸಾಮಾಜಿಕ ಕಾಳಜಿ. ಮುಜಿಬುನ್ನಿಸಾಳಂತ ಬಡ ರೋಗಿಯ ಪ್ರೀತಿ ವಿಶ್ವಾಸಗಳು ಡ್ರಮ್ಮಿನಲ್ಲಿ ತುಂಬಿದೆ. ಹಾಗಾಗಿ ಇದು ಮನೆಯ ಮೂಲೆಯಲ್ಲಿ ಬಿಡಬಹುದಾದ ವಸ್ತುವಲ್ಲ" ಎಂದು. ಕಳೆದ 30 – 35 ವರ್ಷಗಳಿಂದ ಮೇಜಿನ ಮೇಲೆ ಇಟ್ಟು ನಿತ್ಯವೂ ಅದರಿಂದಲೇ ನೀರನ್ನು ಕುಡಿಯುವಂತೆ ವ್ಯವಸ್ಥೆ ಮಾಡಿದ್ದಾಳೆ.

ಜಾಫರ್ ಮತ್ತೆ ನನ್ನ ಕಣ್ಣಿಗೆ ಬೀಳಲಿಲ್ಲ. ಮುಜಿಬುನ್ನಿಸಾ ತೀರಿ ಹೋದಳೆಂಬ ಸುದ್ದಿಯು ಬಂತು. ಆದರೆ ಈ ಬರಹವನ್ನು ಮುಗಿಸಿದಾಗ ಮೇಜಿನ ಮೇಲಿರುವ, ನೀರನ್ನು ತುಂಬಿಕೊಂಡ ಡ್ರಮ್ಮಿಗೆ ಜೀವವಿರುವಂತೆ ಅನಿಸಿತು.

# ಒಂದು ನಾಣ್ಯದ ವ್ಯಥೆ

ನಾರಾಯಣಸ್ವಾಮಿ ಎಂಬ ಅಸ್ತಮಾ ಕಾಯಿಲೆ ಇರುವ ವ್ಯಕ್ತಿ ನನ್ನ ಕ್ಲಿನಿಕ್‌ಗೆ ಆಗಾಗ ಬರುತ್ತಿದ್ದರು. ಒಮ್ಮೆ ಒಂದು ಬೆಳಿಗ್ಗೆ ಅತ್ಯಂತ ತರಾತುರಿಯಲ್ಲಿ ನಾರಾಯಣಸ್ವಾಮಿಯವರು ತಮ್ಮ ಹದಿಮೂರು ಹದಿನಾಲ್ಕು ವರ್ಷ ವಯಸ್ಸಿನ ಮಗಳೊಂದಿಗೆ ಬಂದಿದ್ದರು. ಸರದಿಯಲ್ಲಿರುವ ಉಳಿದ ರೋಗಿಗಳಲ್ಲಿ ವಿನಂತಿಸಿಕೊಂಡು ನನ್ನ ಕೊಠಡಿಯನ್ನು ಪ್ರವೇಶಿಸಿದ್ದರು. ನಾನು ಅವರನ್ನು ಗಮನಿಸುವುದನ್ನು ಕಾಯದೆ ಮಗಳಿಗೆ ಬಯ್ಯಲು ಪ್ರಾರಂಭಿಸಿದರು.

"ನೋಡಿ ಸರ್, ಇಷ್ಟು ದೊಡ್ಡ ಹುಡುಗಿ ಬುದ್ಧಿ ಇರಬೇಕಲ್ವಾ? ರೂಪಾಯಿ ನಾಣ್ಯವನ್ನು ಬಾಯಲ್ಲಿಟ್ಟುಕೊಂಡು ನುಂಗಿಬಿಟ್ಟಿದ್ದಾಳೆ. ಇವಳು ನಾಣ್ಯವನ್ನು ನುಂಗಿ ಸುಮಾರು 2 ಗಂಟೆ ಕಳೆದಿದೆ, ನಾನು ನನ್ನ ಮನೆಯವಳು ಮನೆಯಲ್ಲಿ ಇರಲಿಲ್ಲ. ಈಗ ಬಂದವನೇ ನಿಮ್ಮಲ್ಲಿಗೆ ಕರೆ ತಂದಿದ್ದೇನೆ. ಏನಾದರೂ ಮಾಡಿ ವಾಂತಿ ಮಾಡಿಸಿದರೆ ನಾಣ್ಯ ಹೊರಬರಬಹುದು" ಎಂದೆಲ್ಲ ಉದ್ವೇಗದಿಂದ ಮಾತನಾಡುತ್ತಿದ್ದರು

ನುಂಗಿದ ವಸ್ತುಗಳೆಲ್ಲ ವಾಂತಿ ಮಾಡಿದ ತಕ್ಷಣ ಹೊರಗೆ ಬರಲಾರದು ಎಂಬ ಸಾಮಾನ್ಯ ಜ್ಞಾನ ಎಲ್ಲರಿಗೂ ಇರದು. ನಾಣ್ಯದಂತ ವಸ್ತುಗಳನ್ನು ವಾಂತಿ ಮಾಡಿಸಿ ಹೊರತೆಗೆಯುವುದು ಅಪಾಯಕಾರಿಯೂ ಹೌದು. ಇಂತಹ ವಸ್ತುಗಳು ಶ್ವಾಸಕೋಶವನ್ನು ಸೇರಿ ಮಾರಣಾಂತಿಕವೂ ಆಗಬಹುದು. ಈ ಹುಡುಗಿ ಅದಾಗಲೇ ನಾಣ್ಯವನ್ನು ನುಂಗಿ 2 ಗಂಟೆಗಳು ಕಳೆದಿದ್ದರಿಂದ ನಾಣ್ಯ ಅದಾಗಲೇ ಸಣ್ಣ ಕರುಳಿಗೆ ರವಾನೆಯಾಗಿರಬಹುದು.?

ಹುಡುಗಿ ಮಂಜುಳಾ ಯಾವುದೇ ಆತಂಕವಿಲ್ಲದೆ ನಿರಾಳವಾಗಿದ್ದಳು.

"ದೊಡ್ಡವಳಾದ್ದರಿಂದ ಕರುಳಿನ ವ್ಯಾಸವು ಸ್ವಲ್ಪ ದೊಡ್ಡದಿರುತ್ತದೆ. ಹಾಗಾಗಿ ಮಲವಿಸರ್ಜನೆಯಲ್ಲಿ ನಾಣ್ಯ ಹೊರ ಹೋಗಬಹುದು, ಎರಡು ದಿನ ನೋಡೋಣ. ಸದ್ಯಕ್ಕೆ ಬೇಕಾದರೆ ಹೊಟ್ಟೆಯ ಎಕ್ಸ್‌ರೇ ತೆಗೆಸಿ" ಎಂದು ಬರೆದುಕೊಟ್ಟೆ "ಸ್ವಲ್ಪ ಸಮಯದ ಅಂತರದಲ್ಲಿ ಐದಾರು ಬಾಳೆಹಣ್ಣುಗಳನ್ನು ತಿನ್ನಲು ನೀಡಿ, ರಾತ್ರಿ ಮಲಗುವಾಗ ಎರಡು ಚಮಚ ಲೆಕ್ಸೆಟಿವ್ ಲಿಕ್ವಿಡ್ ಕುಡಿಸಿ" ಎಂದು ಹೇಳಿದೆ. ನಾರಾಯಣಸ್ವಾಮಿಯವರನ್ನು ಗಾಬರಿಯಾಗುವ ಅವಶ್ಯಕತೆ ಇಲ್ಲ ಎಂದು ಸಮಾಧಾನಿಸಿದೆ.

ಅರ್ಧ ಗಂಟೆಯ ಒಳಗಾಗಿ ಮಂಜುಳನ ಹೊಟ್ಟೆಯ ಎಕ್ಸರೇಯನ್ನು ತೆಗೆದುಕೊಂಡು ಬಂದರು. ರಿಪೋರ್ಟ್‌ನಲ್ಲಿ ನಾಣ್ಯ ಸಣ್ಣ ಕರುಳಿನಲ್ಲಿ ಇರುವುದು ದೃಢವಾಯಿತು. ಹಾಗೆ ಮಲವಿಸರ್ಜನೆಯನ್ನು ಪೇಪರ್‌ನಲ್ಲಿ ಮಾಡಿಸಿ, ರೂಪಾಯಿ ನಾಣ್ಯ ಹೊರಹೋಯಿತೇ ಎಂದು ಸುಲಭವಾಗಿ ತಿಳಿಯುವುದು. ಒಂದೆರಡು ದಿನ ಇದೇ ತರಹ ಮಾಡಬೇಕಾಗುತ್ತದೆ ಎಂದು ಹೇಳಿದೆ. ಆತುರ, ಉದ್ವೇಗ, ಆವೇಶದ ನಾರಾಯಣಸ್ವಾಮಿಯವರಿಗೆ, 'ಮಗಳು ತಮಗೆ ಒಳ್ಳೆಯ ಕೆಲಸವನ್ನು ಕೊಟ್ಟಳು' ಎಂದು ಕಾಲೆಳೆದೆ.

ನಾರಾಯಣಸ್ವಾಮಿ ಅವರು ಮರುದಿನ ಹತ್ತು ಗಂಟೆಗೆ ಮಗಳೊಂದಿಗೆ ಕ್ಲಿನಿಕ್ಕಿಗೆ ಹಾಜರಾದರು. 'ಮಗಳು ಎರಡು ಬಾರಿ ಬಹಿರ್ದೆಸೆಗೆ ಹೋದರೂ ನಾಣ್ಯ ಕಾಣಿಸಲಿಲ್ಲ' ಎಂದು ಆತಂಕದಿಂದಲೇ ಹೇಳಿದರು. ಅವರ ಆತಂಕ ಹೀಗೂ ಇತ್ತು, "ಡಾಕ್ಟ್ರೇ ಆಪರೇಷನ್ ಮಾಡಿಸಬೇಕಾಗಬಹುದೇ? ಎಲ್ಲಾ ನನ್ನ ಕರ್ಮ" ಎಂದು ತಲೆ ಚಚ್ಚಿಕೊಳ್ಳುತ್ತಲೇ ಕೇಳಿದರು.

"ಈಗ ಇನ್ನೊಂದು ಎಕ್ಸರೇ ತಗಿಸಲೇ?" ಎಂದಾಗ, ಅವರ ಆತಂಕಕ್ಕೆ ಬೇರೆ ಔಷಧಿ ಇಲ್ಲವೇ ಇಲ್ಲವೆಂದು, "ಹಾಗೆ ಮಾಡಿ" ಎಂದೆ. ಪುನಃ ಅರ್ಧ ಗಂಟೆಯಲ್ಲಿ ಎಕ್ಸರೇ ರಿಪೋರ್ಟ್ ರೆಡಿಯಾಗಿತ್ತು. ಅದರಲ್ಲಿ ನಾಣ್ಯ, ಸಣ್ಣ ಕರುಳಿನಿಂದ ಮುಂದೆ ಹೋಗಿದ್ದು ಸ್ಪಷ್ಟವಾಗಿದ್ದರೂ, ದೊಡ್ಡ ಕರುಳಿಗೆ ತಲುಪಿದ ಕುರುಹು ಕಾಣಿಸಲಿಲ್ಲ. ಸಣ್ಣ ಕರುಳು, ದೊಡ್ಡ ಕರುಳು ಸೇರುವ ಜಾಗ ಸ್ವಲ್ಪ ಚಿಕ್ಕದಿರುವ ಕಾರಣ ಹೀಗಾಗಿರಬಹುದು, ನಾಣ್ಯ ದೊಡ್ಡ ಕರುಳನ್ನು ಸೇರಿದರೆ ಸುಲಭವಾಗಿ ಮಲವಿಸರ್ಜನೆಯಲ್ಲಿ ಹೊರಹೋಗುತ್ತದೆ. ಮಂಜುಳಳಿಗೆ ಹೊಟ್ಟೆ ನೋವು ಅಥವಾ ಇನ್ನಿತರ ಯಾವುದೇ ತೊಂದರೆ ಕಾಣಿಸದ ಕಾರಣ ನಿನ್ನೆ ಹೇಳಿದಂತೆ ಬಾಳೆಹಣ್ಣು ಮತ್ತು ಲೆಕ್ಸೆಟಿವ್ ಲಿಕ್ವಿಡ್ ಇಂದೂ ಮುಂದುವರಿಸಿ, ಇವತ್ತೊಂದು ದಿನ ನೋಡೋಣ" ಎಂದು ನಾರಾಯಣಸ್ವಾಮಿಯವರಿಗೆ ಹೇಳಿದೆ.

ನಾರಾಯಣಸ್ವಾಮಿಯವರಿಗೆ ನನ್ನ ಮಾತಿನ ಭರವಸೆ ಸಾಕಾಗಲಿಲ್ಲ. "ಡಾಕ್ಟ್ರೇ ಹೊಟ್ಟೆನೋವೆನಾದರೂ ಬಂದರೆ ನಿಮ್ಮಲ್ಲಿಗೆ ಕರೆತರಲೇ?" ಎಂದರು.

"ಹಾಗೇನಾದ್ರೂ ಆದಲ್ಲಿ ಖಂಡಿತಾ ಕರೆದು ತನ್ನಿ, ಧೈರ್ಯವಾಗಿರಿ ತೊಂದರೆ ಏನು ಆಗುವುದಿಲ್ಲ" ಎಂದೆ.

ಮೂರನೆಯ ದಿನ ಮಂಜುಳಳೊಂದಿಗೆ ನಾರಾಯಣಸ್ವಾಮಿಗಳು ಎಕ್ಸರೇಯನ್ನು ತೆಗೆಸಿಕೊಂಡೆ ನನ್ನಲ್ಲಿಗೆ ಬಂದರು. ನಾಣ್ಯ ಹೊರ ಹೋಗಿರುವುದನ್ನು ತಿಳಿಸಲು ಬಂದಿರಬಹುದೆಂದು ನಾನು ಅಂದುಕೊಂಡೆ. ನಾರಾಯಣಸ್ವಾಮಿ ಅವರು, "ಸ್ವಾಮಿ ಡಾಕ್ಟರ್, ಇವತ್ತೂ ನಾಣ್ಯ ಬರಲಿಲ್ಲ ಪರೀಕ್ಷಿಸಿ ನೋಡಿದೆವು. ಹಾಗಾಗಿ ಎಕ್ಸರೇಯನ್ನು ತೆಗೆಸಿಕೊಂಡು ಬಂದೆ"

ಎಂದರು. ಎಕ್ಸರೆಯನ್ನು ನೋಡಿದಾಗ, ನಾಣ್ಯ ದೊಡ್ಡ ಕರುಳಿನಲ್ಲಿ ಬಂದ ಹಾಗೆ ಕಾಣಿಸಿತು. ಇವತ್ತೋ, ನಾಳೆಯೋ ನಾಣ್ಯ ಹೊರಬರುವುದೆಂದು ನನಗೆ ಭರವಸೆ ಇತ್ತು. ಆದರೆ ನಾರಾಯಣಸ್ವಾಮಿಯವರ ಆತಂಕಕ್ಕೆ ಆಸ್ಪತ್ರೆಗೆ ಕಳುಹಿಸುವುದೇ ಔಷಧಿಯಾಗಿತ್ತು.

ಎಂಎಸ್ ರಾಮಯ್ಯ ಮೆಡಿಕಲ್ ಕಾಲೇಜಿನ ಗ್ಯಾಸ್ಟ್ರೋ ಎಂಟರಾಲಜಿ ಡಿಪಾರ್ಟ್ಮೆಂಟಿನ ಓ.ಪಿ.ಡಿ.ಗೆ ರೆಫರೆನ್ಸ್ ಲೆಟರ್ ಕೊಟ್ಟು ಕಳುಹಿಸಿದೆ.

ನಾರಾಯಣಸ್ವಾಮಿಯವರು ಆಗಿನ ಕಾಲದ ತಮ್ಮ ಮೋಟರ್ ಸೈಕಲ್ಲಿನಲ್ಲಿಯೇ ಮಗಳನ್ನು ಕೂರಿಸಿಕೊಂಡು ಎಮ್.ಎಸ್. ರಾಮಯ್ಯ ಆಸ್ಪತ್ರೆಗೆ ಹೊರಟರು.

ಅಂದೇ ಮಧ್ಯಾಹ್ನ ಎರಡು ಗಂಟೆಗೆ ನಾರಾಯಣಸ್ವಾಮಿಯವರು ಮಗಳೊಂದಿಗೆ ನನ್ನ ಕ್ಲಿನಿಕ್ಕಿಗೆ ಹಾಜರಾದರು. ಮುಖದಲ್ಲಿ ಆತಂಕ ಮರೆಯಾಗಿ ಮಂದಸ್ಮಿತರಾಗಿದ್ದರು. ಇಷ್ಟು ಬೇಗ ಕೆಲಸವಾಯಿತೆ ಎಂದು ಆಶ್ಚರ್ಯ ಪಟ್ಟೆ!?

ನಾರಾಯಣ ಸ್ವಾಮಿಯವರು, ಆಸ್ಪತ್ರೆಯ ವಿವರವನ್ನು ಹೇಳಿದರು. ಅವರು ಎಂ.ಎಸ್. ರಾಮಯ್ಯ ಆಸ್ಪತ್ರೆಗೆ ಹೋದ ದಿನ, ಮಂಗಳವಾರವಾಗಿತ್ತು. ಅಷ್ಟೇನೂ ಹೊರರೋಗಿಗಳು ಇರಲಿಲ್ಲ. ಅಲ್ಲಿ ಈ ಮೊದಲೇ ತೆಗೆಸಿದ ಎಕ್ಸರೇಗಳನ್ನು ನೋಡಿ, ಈ ಮೊದಲು ಮಾಡಿಸಿದ ಚಿಕಿತ್ಸೆಗಳನ್ನು ವಿವರವಾಗಿ ತಿಳಿದುಕೊಂಡರು.

"ಒಂದು ದಿನ ಒಳರೋಗಿಯಾಗಿ ಮಗಳನ್ನು ಸೇರಿಸಬೇಕಾಗುತ್ತದೆ. ಒಂದು ಟ್ಯೂಬ್‌ನ ಮೂಲಕ ನಾಣ್ಯವನ್ನು ಹೊರತೆಗೆಯಬೇಕಾಗುತ್ತದೆ" ಎಂದರು. ಇದರ ನಡುವೆ ಸೀನಿಯರ್ ಡಾಕ್ಟರ್ ಒಬ್ಬರು, "ನೀವು ಈ ಬೆಳಿಗ್ಗೆ ಎಕ್ಸರೇ ತೆಗೆಸಿದ ಮೇಲೆ ಮಗಳು ಬಹಿರ್ದೆಸೆಗೆ ಹೋಗಿದ್ದಾಳೆಯೇ?" ಎಂದು ವಿಚಾರಿಸಿದರು. ಮಂಜುಳಾ ಎರಡು ದಿನಗಳಿಂದ ಬಾಳೆಹಣ್ಣು, ಲ್ಯಾಕ್ಟಿಕ್ ಲಿಕ್ವಿಡ್ ತೆಗೆದುಕೊಳ್ಳುತ್ತಿದ್ದಳು. ನಾರಾಯಣಸ್ವಾಮಿಯವರ ಮೋಟರ್ ಸೈಕಲ್, ಆಗಿನ ಕಾಲದ ರಸ್ತೆ, ಇವುಗಳಿಂದ ಹೊಟ್ಟೆಯ ಕುಲುಕಾಟವು ಚೆನ್ನಾಗಿ ನಡೆಯಿತು. ಅದರಿಂದ ಆಸ್ಪತ್ರೆಗೆ ಹೋದ ತಕ್ಷಣ ಒಂದು ಸಾರಿ ಬಹಿರ್ದೆಸೆಗೆ ಹೋಗಿ ಬಂದಳು. ಇದನ್ನು ತಿಳಿದಾಕ್ಷಣ ಸೀನಿಯರ್ ಡಾಕ್ಟರ್, ಇನ್ನೊಂದು ಎಕ್ಸರೇ ತೆಗೆಸುವಂತೆ ಹೇಳಿದರು. ಆ ಎಕ್ಸರೆಯನ್ನು ನೋಡಿದಾಗ ಮಂಜುಳಾಳ ಹೊಟ್ಟೆಯಲ್ಲಿರುವ ನಾಣ್ಯ ಮಾಯವಾಗಿತ್ತು. ಅದನ್ನು ಪರೀಕ್ಷಿಸಿದ ಡಾಕ್ಟರ್, "ನಿಮ್ಮ ಅದೃಷ್ಟ ಚೆನ್ನಾಗಿದೆ. ಮಂಜುಳಾ ಈಗ ಮಲ ವಿಸರ್ಜನೆ ಮಾಡುವಾಗ ನಾಣ್ಯ ಹೊರಹೋಗಿದೆ. ಇನ್ನೇನು ತೊಂದರೆ ಇಲ್ಲ, ನೀವಿನ್ನು ನಿಶ್ಚಿಂತೆಯಿಂದ ಮನೆಗೆ ಹೋಗಬಹುದು" ಎಂದರು. ಹೀಗೆ ನಿರಾಳವಾದ ಮನಸ್ಥಿತಿಯಲ್ಲಿ ನಾರಾಯಣಸ್ವಾಮಿಗಳು ಎಲ್ಲವನ್ನು ವಿವರಿಸಿದರು.

ನಾನು ರಾಮಯ್ಯ ಆಸ್ಪತ್ರೆಯಲ್ಲಿ ತೆಗೆಸಿದ ಎಕ್ಸರೇಯನ್ನು ಒಮ್ಮೆ ನೋಡಿದೆ. ನಾರಾಯಣಸ್ವಾಮಿಯವರನ್ನು ಆಸ್ಪತ್ರೆಗೆ ಕಳುಹಿಸುವ ಬದಲು, ಮಗಳನ್ನು ಮೋಟರ್ ಸೈಕಲ್‌ನಲ್ಲಿ ಕೂರಿಸಿಕೊಂಡು ನಾಲ್ಕಾರು ಸುತ್ತು ಹೊಡೆಯುವಂತೆ ಹೇಳಬಹುದಿತ್ತು ಅನಿಸಿತು.

ರಾಮಯ್ಯ ಆಸ್ಪತ್ರೆಯಲ್ಲಿ ಸೀನಿಯರ್ ಡಾಕ್ಟರ್ ತೆಗೆದುಕೊಂಡ ನಿರ್ಧಾರ ಸರಿಯಾಗಿತ್ತು. ಮತ್ತೊಮ್ಮೆ ಎಕ್ಸರೇ ಮಾಡಿಸಿದ ಪರಿಣಾಮ ಮಂಜುಳಾಳಿಗೆ ರೊಲೆನೋಸ್ಕೋಪಿಯ ಚಿಕಿತ್ಸೆಯ ತೊಂದರೆ ತಪ್ಪಿತು.

ನಾರಾಯಣಸ್ವಾಮಿಯವರ ಆತಂಕಕ್ಕೆ, ಇಷ್ಟೆಲ್ಲ ಓಡಾಡುವಂತಾಯಿತು. ಸ್ವಲ್ಪ ಸಹನೆ ಇದ್ದಿದ್ದರೆ, ನಿರಾಯಾಸವಾಗಿ ಪರಿಹಾರವಾಗುವ ಸಮಸ್ಯೆಯನ್ನು ಶ್ರಮದಿಂದ ಪರಿಹರಿಸಿಕೊಂಡಂತಾಯಿತು.

# ಕಿಟಕಿಯಿಂದ ಬಂದ ಉಸಿರು

ನನ್ನೂರು ಕೋಟದಿಂದ ಹನ್ನೆರಡು ಕಿಲೋಮೀಟರ್ ಅಂತರದಲ್ಲಿರುವ ಬ್ರಹ್ಮಾವರ. ನಾನು ಹೈಸ್ಕೂಲನ್ನು ಓದಿದ್ದು ಬ್ರಹ್ಮಾವರದಲ್ಲಿಯೇ. ಹಾಗಾಗಿ ಬ್ರಹ್ಮಾವರದ ಮಣ್ಣು, ಮೈ-ಮನಸ್ಸನ್ನೆಲ್ಲ ಅಂಟಿಕೊಂಡಿದೆ. ಸುಮಾರು ಮೂರರಿಂದ ನಾಲ್ಕು ಸಾವಿರ ಜನಸಂಖ್ಯೆ ಇರುವ ದೊಡ್ಡ ಊರು. ಅಷ್ಟೇ ಅಲ್ಲದೆ ನಾಲ್ಕೈದು ಕಿಲೋಮೀಟರ್ ಸುತ್ತಳತೆಯಲ್ಲಿ ಹದಿನೈದರಿಂದ ಇಪ್ಪತ್ತು ಹಳ್ಳಿಗಳಿದೆ. ಅದರಿಂದ ಎಂಬಿಬಿಎಸ್ ಮುಗಿಸಿ ಬಂದಾಗ ಕ್ಲಿನಿಕ್ ತೆರೆಯಲು ಕಂಡ ಮೊದಲ ಊರೇ ಬ್ರಹ್ಮಾವರವಾಗಿತ್ತು.

ಅವಿವಾಹಿತನಾದ್ದರಿಂದ ಮನೆಯಿಂದಲೇ ಕ್ಲಿನಿಕ್ಕಿಗೆ ಓಡಾಡುತ್ತಿದ್ದೆ. ಬೆಳಿಗ್ಗೆ ಒಂಬತ್ತು ಗಂಟೆಗೆ ಕ್ಲಿನಿಕ್ ತೆರೆದು ವೃತ್ತಿಯನ್ನು ಪ್ರಾರಂಭಿಸುತ್ತಿದ್ದೆ.

ಹೀಗೆ ನನ್ನ ದಿನಚರಿ ಪ್ರಾರಂಭವಾದ ಕಾಲ, ಒಂದು ದಿನ ಬೆಳಿಗ್ಗೆ ಕ್ಲಿನಿಕ್ಕನ್ನು ತೆರೆದು ಇನ್ನೂ ಹತ್ತು ನಿಮಿಷಗಳು ಆಗಿರಲಿಲ್ಲ. ಇಬ್ಬರು ಓಡುತ್ತಲೇ ಕ್ಲಿನಿಕ್ಕಿಗೆ ಬಂದರು. ಅವರ ಉಸಿರಾಟ ಓಡಿ ಬಂದ ಆಯಾಸಕ್ಕಿಂತ, ಆಘಾತದಿಂದ ಉಂಟಾದ ಗಾಬರಿಯನ್ನು ಹೇಳುತ್ತಿತ್ತು. ಹಾಗೆ ನನ್ನಲ್ಲಿಗೆ ಬಂದಿದ್ದಾರೆ ಎಂದರೆ ತೀವ್ರವಾದ ಆರೋಗ್ಯದ ಸಮಸ್ಯೆ ಉಂಟಾಗಿದೆ ಎಂದು ಯಾರೂ ಹೇಳಬಹುದು. ಬಂದವರೆ, "ಡಾಕ್ಟ್ರೇ ನೀವು ಅರ್ಜೆಂಟಾಗಿ ನಮ್ಮನೆಗೆ ಬರಬೇಕು. ನಮ್ಮ ಮಾವ ಗೋಪಾಲ ದೇವಾಡಿಗರು, ಹೊಲ ಉಳುವಾಗ ಅಲ್ಲೇ ಕುಸಿದು ಬಿದ್ದರು. ಎತ್ತಿ ತಂದು ಮನೆ ಚಾವಡಿಯಲ್ಲಿ ಮಲಗಿಸಿದ್ದೇವೆ. ಬಂದು ನೋಡಿ" ಎಂದು ಹೇಳಿದ ಮಾತಿನಲ್ಲಿ, ಅವಸರ, ದೈನ್ಯ, ವಿನಂತಿ, ಪ್ರಾರ್ಥನೆ ಎಲ್ಲವೂ ಇತ್ತು. ಇಂತಹ ಸಂದರ್ಭದಲ್ಲಿ ಏನಾಗಿರಬಹುದು ಎಂದು ಊಹಿಸುವುದಕ್ಕಿಂತ, ದೌಡಾಯಿಸುವುದೆ ಮುಖ್ಯ. ಯಾಕೆಂದರೆ ಅಲ್ಲಿಯ ಒಂದೊಂದು ನಿಮಿಷವು ವ್ಯಕ್ತಿಯ ಜೀವಿತಕಾಲವನ್ನು ನಿರ್ಧರಿಸುತ್ತದೆ. ಹಾಗಾಗಿ ನನ್ನ ವಿಸಿಟಿಂಗ್ ಕಿಟ್ಟು, ಮತ್ತು ಬಿಪಿ ಆಪರೇಟರ್ ಸಿದ್ಧಪಡಿಸಿಕೊಂಡು ಬಂದವರೊಂದಿಗೆ ಹೊರಟೆ.

ಗೋಪಾಲ ದೇವಾಡಿಗರ ಮನೆ ನನ್ನ ಕ್ಲಿನಿಕ್ಕಿನಿಂದ ಒಂದು ಕಿಲೋಮೀಟರ್ ದೂರ ಇರಬಹುದು. ಗದ್ದೆಯ ಅಂಚು ಕಟ್ಟಿನ ಕಾಲುದಾರಿಯಲ್ಲಿ ಸಾಗಿ, ಅವರ ಮನೆಯನ್ನು ತಲುಪಬೇಕು. ಆಗೆಲ್ಲ ಹಳ್ಳಿಯ ಮನೆ ಮನೆಗಳಿಗೆ ರಸ್ತೆಯ ವ್ಯವಸ್ಥೆಯು ಇರಲಿಲ್ಲ. ಹಳ್ಳಿಗಳಲ್ಲಿ ವೈದ್ಯಕೀಯ ಸೇವೆ ನೀಡುವ ಸಂಕಲ್ಪ ಮಾಡಿಕೊಂಡ ವೈದ್ಯರು, ಈ ರೀತಿಯ ಸಂದರ್ಭದಲ್ಲಿ ನಡೆಯುವುದು,

ಓಡುವುದು, ಹತ್ತುವುದು, ಇಳಿಯುವುದು ಮುಂತಾದ ದೈಹಿಕ ಶ್ರಮಕ್ಕೂ ಸಿದ್ಧನಿರಬೇಕಾಗುತ್ತಿತ್ತು. ನನಗೇನೂ ಈ ರೀತಿಯ ದಾರಿಗಳು ಹೊಸದಾಗಿರಲಿಲ್ಲ. ಬಂದವರ ಮನಸ್ಸಿನ ಧಾವಂತಕ್ಕೆ ಸರಿಯಾಗದಿದ್ದರೂ, ದೈಹಿಕ ವೇಗಕ್ಕೆ ಹೊಂದಿಕೊಂಡು ಹಿಂಬಾಲಿಸುತ್ತಿದ್ದೆ.

ನನ್ನ ಬಾಲ್ಯದಿಂದಲೆ ಈ ಗೋಪಾಲ ದೇವಾಡಿಗರ ಪರಿಚಯವಿತ್ತು. ಬ್ರಹ್ಮಾವರದ ಈಶ್ವರ ದೇವಸ್ಥಾನದಲ್ಲಿ ವಾದ್ಯವನ್ನು ನುಡಿಸುತ್ತಿದ್ದರು. ಅವರ ಕ್ಲಾರಿಯೋನೆಟ್ ವಾದನ ನನ್ನನ್ನು ಬಹಳ ಆಕರ್ಷಿಸಿತ್ತು. ಹಾಗಾಗಿ ಹಬ್ಬ ಹರಿದಿನಗಳಲ್ಲಿ ತಪ್ಪದೇ ಈ ವಾದನವನ್ನು ಕೇಳುವುದಕ್ಕಾಗಿ ದೇವಸ್ಥಾನಕ್ಕೆ ಹೋಗುತ್ತಿದ್ದೆ. ಹೀಗೆ ಹೈಸ್ಕೂಲ್ ಮುಗಿಸಿ, ಬೇರೆಡೆಯಲ್ಲಿ ಎಂಬಿಬಿಎಸ್ ಕಲಿತು ಮತ್ತೆ ಬ್ರಹ್ಮಾವರದಲ್ಲೆ ಕ್ಲಿನಿಕ್ ತೆರೆದಾಗ, ನನಗೂ ದೇವಾಡಿಗರಿಗೂ ವೈದ್ಯ ರೋಗಿಯ ಸಂಬಂಧ ಬೆಳೆಯಿತು. ಮೊದಲು ನಾನು ದೇವಾಡಿಗರ ವಾದನವನ್ನು ಕೇಳುತ್ತಿದ್ದೆ. ಈಗ ದೇವಾಡಿಗರು ನನ್ನ ಸಲಹೆಯನ್ನು ಕೇಳಬೇಕಿತ್ತು. ದೇವಾಡಿಗರಿಗೆ ರಕ್ತದೊತ್ತಡ ಪ್ರಾರಂಭವಾಗಿತ್ತು. ಹಾಗಾಗಿ ಆಗಾಗ ಪರೀಕ್ಷೆಗಾಗಿ ನನ್ನಲ್ಲಿ ಬರುತ್ತಿದ್ದರು. ಆ ಕಾಲದಲ್ಲಿ ಕೃಷಿ ಅಥವಾ ಕೂಲಿ ಕೆಲಸಗಳನ್ನು ಮಾಡುವವರಿಗೆ ಸಹಜವಾಗಿಯೇ ಬೀಡಿ ವ್ಯಸನ ಇರುತ್ತಿತ್ತು. ದೇವಾಡಿಗರಿಗೆ ಸ್ವಲ್ಪ ಹೆಚ್ಚೆಂಬಷ್ಟು ಈ ವ್ಯಸನ ಇತ್ತು. ಹಾಗಾಗಿ ಕ್ಲಿನಿಕ್ಕಿಗೆ ಬಂದಾಗಲೆಲ್ಲ ವ್ಯಸನದ ದುಷ್ಪರಿಣಾಮವನ್ನು ಮತ್ತೆ ಮತ್ತೆ ಹೇಳುತ್ತಿದ್ದೆ. ದೇವಾಡಿಗರಿಗೆ ಈ ವ್ಯಸನದ ನಂಟು ಬಹಳ ಕಾಲದಿಂದಲೇ ಇತ್ತು. ಹಾಗಾಗಿ ಅದನ್ನು ಬಿಡಲಾರದ ದೌರ್ಬಲ್ಯವೂ ಉಂಟಾಗಿತ್ತು. ಇಂತಹ ದೇವಾಡಿಗರ ಕ್ಲಾರಿಯೋನೆಟ್ ವಾದನ ಕಿವಿ ತುಂಬಿದಂತೆ ಅನಿಸಿತು. ಹೊಗೆಯುಗುಳುತ್ತಾ ಕ್ಲಿನಿಕ್ಕಿಗೆ ಬರುವ ಚಿತ್ರವು ಕಣ್ಣು ಮುಂದೆ ಹಾದುಹೋಯಿತು. ಆ ಗದ್ದೆ ಬಯಲಿನ ದಾರಿಯಲ್ಲಿ ಈ ನೆನಪುಗಳು ಮುಂದಿನಿಂದ ಬಂದು ನಮ್ಮನ್ನು ದಾಟಿ ಓಡಿದಂತೆ ಸಾಗುತ್ತಿದ್ದವು. ಗದ್ದೆಯಲ್ಲಿ  ಊಳುವುದಕ್ಕೆ ಕಟ್ಟಿದ ಕೋಣದ ಜೋಡಿಯೊಂದು ದೇಶ ಕಾಲಗಳ ಪರಿವೆಯಿಲ್ಲದೆ ಮೆಲುಕು ಹಾಕುತ್ತ ಒಂಟಿಯಾಗಿ ನಿಂತಿದ್ದವು. ಅಲ್ಲಿಯೇ ಮುಂದೆ ದೇವಾಡಿಗರ ಮನೆ ಇತ್ತು.

ಅದಾಗಲೇ ಮನೆಯ ಅಂಗಳದಲ್ಲಿ ಮೂವತ್ತರಿಂದ ನಲ್ವತ್ತು ಜನರ ಗುಂಪು ಸೇರಿತ್ತು. ಎಲ್ಲರೂ ಮಾತನಾಡುತ್ತಿದ್ದರು, ಯಾರ ಮಾತು ಹೊರಗಡೆ ಕೇಳುತ್ತಿರಲಿಲ್ಲ. ಎಲ್ಲರ ಮುಖದ ಮೇಲು ದುಗುಡವೊಂದು ಚಪ್ಪರವನ್ನು ಹಾಕಿತ್ತು. 'ಡಾಕ್ಟ್ರು ಬಂದ್ರು' ಎಂಬ ಮೌನದ ಮಾತು ಜನರ ಮಧ್ಯದಲ್ಲೊಂದು ದಾರಿಯನ್ನು ಮಾಡಿತ್ತು. ದೇವಾಡಿಗರನ್ನು ಮಲಗಿಸಿದ ಚಾವಡಿಗೆ ಹೋದೆ. ಅಲ್ಲಿಯೂ ಹತ್ತಿಪ್ಪತ್ತು ಹೆಂಗಸರು ಸರೆಗಿನಿಂದ ಬಾಯನ್ನು ಮುಚ್ಚಿಕೊಂಡು, ಕಣ್ಣಲ್ಲಿ ನೀರಿಳಿಸುತ್ತಿದ್ದರು. ಅಲ್ಲಿ ಮಲಗಿಸಿದ ದೇವಾಡಿಗರು ನಿದ್ದೆ ಮಾಡಿದಂತೆ ಕಾಣುತ್ತಿದ್ದರು. ಪಕ್ಕದಲ್ಲಿ ಕುಳಿತು ನನ್ನ ತಪಾಸಣೆಯನ್ನು ಪ್ರಾರಂಭಿಸಿದೆ.

ಮನಸ್ಸಿಗೆ ರೋಗಿಯ ಸ್ಥಿತಿ ಅರಿವಾದರೂ ಪರೀಕ್ಷಿಸಿಯೇ ಹೇಳಬೇಕಾದದ್ದು ನನ್ನ ಧರ್ಮ. ನಾಡಿ ಮಿಡಿಯಲಿಲ್ಲ, ಎದೆ ಬಡಿಯಲಿಲ್ಲ, ಕಪ್ಪನ್ನು ಕೈಗೆ ಸುತ್ತಿ ನೋಡಿದೆ ಬಿಪಿ ರೆಕಾರ್ಡ್ ಆಗುತ್ತಿರಲಿಲ್ಲ. ಚರ್ಮದ ಬಿಸಿ ಆರಿಹೋಗಿತ್ತು, ಕಣ್ರೆಪ್ಪೆಯನ್ನು ಎಳೆದು ಟಾರ್ಚ್ ಬಿಟ್ಟು ನೋಡಿದರೆ ಕಣ್ಣಿನ ಪ್ಯೂಪಿಲ್ (pupil) ಅಗಲವಾಗಿತ್ತು. ವ್ಯಕ್ತಿಯ ದೇಹ ಜೀವಕ್ಕಿಂತ, ಸಾವಿನ ಲಕ್ಷಣವನ್ನು ಹೇಳುತ್ತಿತ್ತು. ದೇವಾಡಿಗರು ತೀರಿಕೊಂಡು ಸುಮಾರು ಒಂದು ಗಂಟೆಯ ಅವಧಿ ಕಳೆದಿತ್ತು. ಅಲ್ಲಿದ್ದವರೆಲ್ಲ ನನ್ನ ಪರೀಕ್ಷೆಯ ಫಲಿತಾಂಶಕ್ಕಾಗಿ ಕಾದಿದ್ದರು. ನನ್ನ ವಿಷಾದದ ಮಾತನ್ನು ಕೇಳಿ, ಅವರೆಲ್ಲರ ಮೌನ ಹರಿದು ಅಳುವು ತೂರಿ ಬಂತು. ದೇವಾಡಿಗರು ತೀವ್ರ ಹೃದಯಾಘಾತದಿಂದ (massive heart attack) ಗದ್ದೆಯಲ್ಲಿ ಕುಸಿದಿರಬಹುದು, ಆಗಲೇ ಅವರ ಉಸಿರು ನಿಂತಿರಬಹುದೆಂದು ಊಹಿಸಿಕೊಳ್ಳುತ್ತಾ ಕ್ಲಿನಿಕ್ಕಿಗೆ ಮರಳಿದೆ.

ಹೊಸದಾಗಿ ಪ್ರಾರಂಭಿಸಿದ ಕ್ಲಿನಿಕ್ಕಾದ್ದರಿಂದ ರೋಗಿಗಳು ತುಂಬಾ ಕಡಿಮೆ ಇದ್ದರು. ಹಾಗಾಗಿ ಗೋಪಾಲ ದೇವಾಡಿಗರ ಯೋಚನೆಯೇ ತಲೆಯಲ್ಲಿ ಸುತ್ತುತ್ತಿತ್ತು. ನಾನು ನೋಡುವಾಗ ದೇವಾಡಿಗರಿಗೆ ಉಸಿರಿದ್ದರೆ, ಮುಂದಿನ ಚಿಕಿತ್ಸೆಗಳನ್ನು ಹೇಗೆಲ್ಲ ನೀಡಬೇಕಾಗುತ್ತದೆ ಎಂದು, ಆ ಕಾಲದ ವ್ಯವಸ್ಥೆಯ ಮೂಲಕ ಯೋಚಿಸುತ್ತಿದ್ದೆ. ಸಮಯ ಸುಮಾರು ಹನ್ನೆರಡುವರೆ ಆಗಿತ್ತು. ಒಂದು ಗಂಟೆಯ ಬಸ್ಸಿಗೆ ಮನೆಗೆ ಹೊರಡುವವನಿದ್ದೆ. ಅಷ್ಟರಲ್ಲಿ ಆ ಯುವಕರಿಬ್ಬರು ಮತ್ತೆ ಓಡುತ್ತಾ ಬಂದಿದ್ದರು. ನನ್ನನ್ನು ಕಂಡವರೇ "ಡಾಕ್ಟ್ರೇ! ನೀವಿನ್ನೂ ಇಲ್ಲೇ ಇದ್ದಿದ್ದು ನಮ್ಮ ಪುಣ್ಯ" ಎಂದರು. ನನಗೆ ದೇವಾಡಿಗರ ಸಾವಿನಿಂದ ಇನ್ನಾರಿಗಾದರೂ ಆಘಾತವಾಯಿತೆ ಎಂಬ ಯೋಚನೆ ಸುಳಿದು ಹೋಯಿತು. ಅಷ್ಟರಲ್ಲಿ ಅವರಲ್ಲೊಬ್ಬ "ದೇವಾಡಿಗರಿಗೆ ಸ್ವಲ್ಪ ಉಸಿರು ಇದ್ದಹಾಗೆ ಅನಿಸ್ತಾ ಇದೆ" ಯಾವುದಕ್ಕೂ ನೀವು ಒಮ್ಮೆ ಬಂದು ಪರೀಕ್ಷಿಸಬೇಕು ಎಂದು ವಿನಂತಿಸಿದ. ಈಗ ಶಾಕ್‌ನಿಂದ ಹಾರ್ಟ್ ಅಟ್ಯಾಕ್ ಆಗುವ ಸರದಿ ನನ್ನದಾಗಿತ್ತು. ನನ್ನ ತಪಾಸಣೆ ತಪ್ಪಾಗಿ, ನಾನು ಹೇಳಿದ ನಿರ್ಣಯ ವ್ಯತ್ಯಾಸವಾದರೆ ಮುಂದಾಗಬಹುದಾದ ಪರಿಣಾಮಗಳೆಲ್ಲ ನನ್ನಲ್ಲಿ ಕಂಪನವನ್ನುಂಟುಮಾಡಿತ್ತು. ಬಂದ ಯುವಕರು "ನೀವು ಒಮ್ಮೆ ಬಂದು ನೋಡಿ. ಅಲ್ಲಿ ಸೇರಿದವರೆಲ್ಲ ಹಾಗೆ ಹೇಳುತ್ತಿದ್ದಾರೆ" ಎಂಬ ಮಾತನ್ನು ಬಿಟ್ಟು ಬೇರೆ ಏನನ್ನು ಹೇಳುತ್ತಿರಲಿಲ್ಲ. ಹಾಗೊಮ್ಮೆ ದೇವಾಡಿಗರಿಗೆ ಉಸಿರಿದ್ದರೆ, ಅತ್ಯಂತ ತುರ್ತಾಗಿ ಮಣಿಪಾಲಿಗೆ ಕಳುಹಿಸುವ ಅನಿವಾರ್ಯತೆಯೂ ಇತ್ತು. ಹಾಗಾಗಿ ನನ್ನ ಯೋಚನೆಯ ವೇಗದೊಂದಿಗೆ, ಕಿಟ್ಟನೆಲ್ಲ ಹಿಡಿದು ಅವರ ಹಿಂದೆ ಓಡಿದೆ. ಮನಸ್ಸು ತಡೆಯದೆ ದಾರಿಯುದ್ದಕ್ಕೂ ಅವರನ್ನು ಪ್ರಶ್ನಿಸುತ್ತಲೇ ಗೋಪಾಲ ದೇವಾಡಿಗರ ಮನೆಯನ್ನು ತಲುಪಿದೆ.

ಸಹಜವಾಗಿಯೇ ಮನೆಯಲ್ಲಿ ಜನರು ತುಂಬಿಕೊಂಡಿದ್ದರು. ಗೋಪಾಲ ದೇವಾಡಿಗರನ್ನು ಪೂರ್ವ ಪಶ್ಚಿಮವಾಗಿ ಮಲಗಿಸಿ, ಸಂಪ್ರದಾಯದಂತೆ ಎರಡು

ದೀಪಗಳನ್ನು ಹಚ್ಚಿಟ್ಟಿದ್ದರು. ಹಿರಿಯರೊಬ್ಬರು ನನ್ನನ್ನು ಕಂಡೊಡನೆ ಆತುರದಿಂದ ಬನ್ನಿ ಬನ್ನಿ ಎಂದು, ಮೂಗಿನೆಡೆಯಲ್ಲಿ ಇಟ್ಟ ಅಲುಗಾಡುತ್ತಿರುವ ಹತ್ತಿಯನ್ನು, ದೇವಾಡಿಗರ ಮೈಮೆಲಿದ್ದ ಅಲುಗಾಡುತ್ತಿರುವ ತೆಳ್ಳಗಿನ ಬಟ್ಟೆಯನ್ನು ತೋರಿಸಿ, "ಸ್ವಲ್ಪ ನೋಡಿ, ಉಸಿರಿದೆಯಾ ನೋಡಿ" ಎಂದು, ಆರ್ಥವಾಗಿ ಹೇಳಿದರು. ಒಂದೇ ಕ್ಷಣದಲ್ಲಿ ಘಟನೆಯ ಅರಿವು ನನಗಾಯಿತು. ಆದರೂ ಕುಳಿತು ನಿಧಾನವಾಗಿ ಮೊದಲಿನಂತೆ, ಇನ್ನೊಂದು ಬಾರಿ ದೇಹವನ್ನು ಪರೀಕ್ಷಿಸಿದೆ. ಅದಾಗಲೇ ಕೈಗಳೆಲ್ಲ ಗಟ್ಟಿಯಾಗಿಬಿಟ್ಟಿತ್ತು. ನಾನು ನಿಡಿದಾದ ಉಸಿರೊಂದನ್ನು ಬಿಟ್ಟು ಮನಸ್ಸನ್ನು ಹತೋಟಿಗೆ ತಂದುಕೊಂಡೆ. ಅವರೆಲ್ಲರ ಆಶಯದಂತೆ ಪವಾಡವಾಗಿ ಉಸಿರಿರಲಿ ಎಂದುಕೊಳ್ಳಲೆ?! ಅಥವಾ ನನ್ನ ಮೊದಲಿನ ಪರೀಕ್ಷೆ ಸರಿಯಾಗಿದೆ ಎಂದು ಸಮಾಧಾನ ಪಡಲೆ?! ಎಂಬ ದ್ವಂದ್ವವೊಂದು ಮನಸ್ಸಿನಲ್ಲಿ ಹಾದುಹೋಯಿತು.

ಆ ಹಿರಿಯರನ್ನು ಕರೆದು, ದೇವಾಡಿಗರನ್ನು ಮಲಗಿಸಿದ ಕಡೆ ಗೋಡೆಗಿರುವ ಸಣ್ಣಕಿಟಕಿಯಿಂದ ಬರುವ ಗಾಳಿಗೆ, ಮೂಗಿನಲ್ಲಿರುವ ಹತ್ತಿಯ ಎಳೆಗಳು ಮತ್ತು ಮೈ ಮೇಲಿದ್ದ ಬಟ್ಟೆ ಅಲುಗಾಡುತ್ತಿರುವುದನ್ನು ಮನಗಾಣಿಸಿದೆ. ಆ ಹಿರಿಯರು "ಡಾಕ್ಟ್ರೇ! ನಮ್ಮಿಂದ ತಪ್ಪಾಯ್ತು. ಸಂಶಯ ಪಟ್ಟೆವು, ದಯವಿಟ್ಟು ಕ್ಷಮಿಸಿ" ಎಂದು ವಿಷಾದದಿಂದ ನುಡಿದರು. ಬೆಳಗಿನ ಸಮಯದಲ್ಲಿ ಓಡಾಡಿಕೊಂಡು ಚಟುವಟಿಕೆಯಿಂದಿರುವ ವ್ಯಕ್ತಿ, ಮಧ್ಯಾಹ್ನದ ಸಮಯಕ್ಕೆ ಹೆಣವಾಗಿ ಮಲಗಿದರೆ ಯಾರಿಗೂ ಒಮ್ಮೆಲೇ ನಂಬಿಕೆ ಕೈಗೂಡದು. ಪವಾಡವೆಂಬಂತೆ ಬದುಕಿ ಬರಲಿ ಎಂಬ ಆಶಯವೊಂದು ಮನಸ್ಸಿನಲ್ಲಿ ಸುಳಿಯದೇ ಇರದು. ಆಲೋಚನೆಗಳೇ ಸ್ತಬ್ಧವಾಗುವ ಇಂತ ಸಮಯದಲ್ಲಿ, ವಿವೇಚನೆ ಮಾಡದಿರುವುದು ಸಹಜವಲ್ಲವೇ? ಅದರಲ್ಲೂ ನಾನಿನ್ನು ಆಗಷ್ಟೇ ಪದವಿ ಮುಗಿಸಿದ ಹುಡುಗ, ವ್ಯತ್ಯಾಸವಾಗಿರಬಹುದು ಎಂದು ಅವರಿಗೆ ಅನಿಸಿದ್ದರು ತಪ್ಪಲ್ಲ. ಅವರೆಲ್ಲರ ಆಶಾಭಾವವನ್ನು ಚಿವುಟಿ ಬಂದಂತೆ ಅನಿಸಿತು.

# ನಾಯಿ - ನೀರು

1973, ನನ್ನ ವೃತ್ತಿ ಜೀವನದ ಪ್ರಾರಂಭ ಕಾಲ. ಔಷಧಿಗಿಂತ ಕೈಗುಣವನ್ನೇ ಹೆಚ್ಚು ನಂಬಿದ ಕಾಲ. ಜನರು ಬರದೆ ಕೈಗುಣ ಗೊತ್ತಾಗದು, ಕೈಗುಣ ಗೊತ್ತಾಗದೆ ಜನರು ಬರಲಾರರು ಎಂಬ ಸಂಕಟ ಆ ಕಾಲಕ್ಕೆ ಸಾಮಾನ್ಯವೂ ಆಗಿತ್ತು. ಅಲ್ಲಿಯೆ ಸುಮಾರು 40 ವರ್ಷಗಳಿಂದ ಆಯುರ್ವೇದ ಚಿಕಿತ್ಸೆಯನ್ನು ಮಾಡುತ್ತಿರುವ ವೈದ್ಯರೊಬ್ಬರು ಅಲ್ಲಿದ್ದರು. ಅವರ ಶುಲ್ಕವೂ ಕಡಿಮೆ. ಸ್ಥಿತಿ ನೋಡಿ ನಿಶ್ಶುಲ್ಕವಾಗಿಯೂ ಔಷಧೋಪಚಾರವನ್ನು ನೀಡುತ್ತಿದ್ದರು.

ಬಂದ ರೋಗಿಗೆ, ಭಾರವಾಗದಂತೆ ಹಿತವಾಗಿ ಚಿಕಿತ್ಸೆ ನೀಡುವುದು ಪುಣ್ಯವೆನಿಸಿಕೊಂಡರೆ, ರೋಗಿಗಳು ಬರಲಿಲ್ಲ ಎಂದು ಕೊರಗಿದರೆ ಪಾಪವಾಗದೆ? ಎಂಬ ದ್ವಂದ್ವವು ಇಲ್ಲದಿಲ್ಲ. 'ಆದರೆ ಈ ಪ್ರಪಂಚದ ವಾಸ್ತವ, ಎಷ್ಟು ವೈದ್ಯರಿದ್ದರೂ ರೋಗಿಗಳ ಸಂಖ್ಯೆ ಕಡಿಮೆಯಾಗದು, ಎಷ್ಟು ಔಷಧಗಳಿದ್ದರೂ ರೋಗದ ಸಂಖ್ಯೆಯು ಕಡಿಮೆಯಾಗದು' ಹೀಗೆ ಕುಳಿತು ಆಲೋಚಿಸುವುದೇ ನನ್ನ ಕೆಲಸವಾಗಿತ್ತು.

ಆಗ ಆ ಊರಿನ ಶ್ರೀನಿವಾಸ ಎನ್ನುವವರೊಬ್ಬರು ನನ್ನ ಕ್ಲಿನಿಕ್ಕಿಗೆ ಬಂದರು. 'ಆಯುರ್ವೇದ ವೈದ್ಯವನ್ನು ನೆಚ್ಚಿಕೊಂಡವರು ಇಲ್ಲೇಕೆ? ಹೇಗೆ ಬಂದರಪ್ಪ?' ಎಂಬ ಯೋಚನೆಯು ನನಗೆ ಬಂದು ಹೋಯಿತು. ಬಹುಶಃ ಅಲ್ಲಿ ಗುಣವಾಗದ ಯಾವುದೋ ಖಾಯಿಲೆಯ ಬಗ್ಗೆ ವಿಚಾರಿಸಲು ಬಂದಿರಬಹುದು ಎಂದುಕೊಂಡೆ. ನನ್ನ ಊಹೆ ನಿಜವು ಆಗಿತ್ತು. "ಹಂದೆಯವರೆ, ನನ್ನ ಎರಡು ಮಕ್ಕಳಿಗೂ ಒಂದು ವಾರದಿಂದ ಜ್ವರ, ನಮ್ಮ ಖಾಯಂ ಡಾಕ್ಟರರಿಂದ ಔಷಧೋಪಚಾರವನ್ನು ಮಾಡಿಸಿದ್ದಾಯಿತು ಏನೂ ಪರಿಣಾಮ ಕಾಣಲಿಲ್ಲ, ನೀವು ಒಮ್ಮೆ ನಮ್ಮ ಮನೆಗೆ ಬಂದು ಪರೀಕ್ಷಿಸಬಹುದೇ? "ಎಂದು ವಿನಂತಿಸಿಕೊಂಡರು. ನಾನು ಒಪ್ಪಿಕೊಂಡೆ.

ಸುಮಾರು ಎರಡು ಕಿಲೋಮೀಟರ್ ಅಂತರವಿರುವ ಅವರ ಮನೆಗೆ ಟ್ಯಾಕ್ಸಿ ಮಾಡಿ ಕರೆದುಕೊಂಡು ಹೋದರು.

ಹತ್ತು, ಹನ್ನೆರಡು ವರ್ಷದ ಎರಡು ಮಕ್ಕಳು ಜ್ವರದಿಂದ ಬಳಲುತ್ತಿದ್ದರು. ಇಬ್ಬರನ್ನು ಕರೆದು ಮಾಮೂಲಿಯಾಗಿಯೇ ಪರೀಕ್ಷಿಸಿದೆ. ತೀವ್ರವಾದ ಜ್ವರವೇನು ಇರಲಿಲ್ಲ. ದೊಡ್ಡ ಮಗನಿಗೆ ಎಂಟು ದಿನಗಳಿಂದ, ಚಿಕ್ಕ ಮಗುವಿಗೆ ಆರು ದಿನಗಳಿಂದ ಜ್ವರವಿದೆ ಎಂದು ವಿವರಿಸಿದರು.

ಆಗ ಈಗಿನಂತೆ ಲ್ಯಾಬೋರೇಟರಿಗಳು ಇರಲಿಲ್ಲ. ತಪಾಸಣೆ ಮಾಡಿದ ವೈದ್ಯನ ಅನುಭವವೇ ರೋಗವನ್ನು ನಿರ್ಧರಿಸಬೇಕಿತ್ತು. ತೀವ್ರವಾದರೆ, ಬಗೆಹರಿಯದಿದ್ದರೆ ಮಣಿಪಾಲ ಅಥವಾ ದೊಡ್ಡ ಆಸ್ಪತ್ರೆಗೆ ಕಳುಹಿಸುವುದು ಎಲ್ಲಾ ಡಾಕ್ಟರ್‌ಗಳಿಗೂ ಇರುವ ದಾರಿಯಾಗಿತ್ತು.

"ನೀವು ತೋರಿಸಿದ ಡಾಕ್ಟರ್ ಏನು ಹೇಳಿದರು?" ಎಂದು ಶ್ರೀನಿವಾಸರನ್ನು ಕೇಳಿದೆ. ಅವರು, ದೊಡ್ಡ ಮಗನಿಗೆ ಕೊಟ್ಟ ಮಾತ್ರೆಯ ಪೊಟ್ಟಣವನ್ನು ತಂದು ತೋರಿಸಿದರು. ಅದಾದರೂ ಜ್ವರಕ್ಕೆ ನೀಡುವ ಬಿಳಿ ಬಣ್ಣದ ಎ.ಪಿ.ಸಿ ಮಾತ್ರೆಗಳಾಗಿದ್ದು ಸುಮಾರು ಹದಿನೈದು ಇಪ್ಪತ್ತು ಮಾತ್ರೆಗಳು ಇತ್ತು. ನನಗನಿಸಿದಂತೆ ಶ್ರೀನಿವಾಸರನ್ನು ಕೇಳಿದೆ.

"ಅರೆ ಮಾತ್ರೆಗಳೆಲ್ಲ ಹಾಗೆಯೇ ಇದೆ. ಹುಡುಗರಿಗೆ ಮಾತ್ರೆಯನ್ನು ಕೊಡಲಿಲ್ಲವೇ?" ಎಂದು ಕೇಳಿದೆ. ರೋಗಿಗಳಲ್ಲಿ ನಿಯತವಾಗಿ ಔಷಧಿ ಸೇವನೆಯಲ್ಲಿ ಶ್ರದ್ಧೆ ಇಲ್ಲದಿರುವುದು ಅಥವಾ ರೋಗಿಯನ್ನು ನೋಡಿಕೊಳ್ಳುವವರಿಗೆ ಮುತುವರ್ಜಿ ಇಲ್ಲದಿರುವುದನ್ನು ನಾನು ವಿದ್ಯಾರ್ಥಿ ಆದಾಗಿನಿಂದ ನೋಡಿದ್ದೇನೆ. ಅಷ್ಟರಲ್ಲಿ ಶ್ರೀನಿವಾಸರ ಹೆಂಡತಿ ಮುಂದೆ ಬಂದು,

"ಡಾಕ್ಟರ್, ಚಿಕ್ಕವನೇನೋ ಮಾತ್ರೆ ನುಂಗುತ್ತಾನೆ. ದೊಡ್ಡವನದೇ ತುಂಬಾ ತಾಪತ್ರಯ. ಮಾತ್ರೆ, ನೀರು ತಂದಾಕ್ಷಣ ವಿಚಿತ್ರವಾಗಿ ವರ್ತಿಸುತ್ತಾನೆ, ಅದನ್ನು ನೋಡಿ ನಮಗೆ ಹೆದರಿಕೆ ಆಗುತ್ತದೆ" ಎಂದರು. ಹಾಗಾದರೆ ಹುಡುಗನ ಗಂಟಲಿನಲ್ಲಿ ಏನಾದರೂ ತೊಂದರೆ ಇರಬಹುದು ಎಂದು ಇನ್ನೊಮ್ಮೆ ಟಾರ್ಚ್ ಹಾಕಿ ಗಂಟಲನ್ನು ಪರೀಕ್ಷಿಸಿದ್ದಾಯಿತು. ಅಲ್ಲಿಯಾದರು ಟಾನ್ಸಿಲ್ಸ್ ಫೆರಿಂಗೈಟಿನ ಇನ್ಫೆಕ್ಷನ್ ಲಕ್ಷಣವೇನು ಕಾಣಿಸಲಿಲ್ಲ. ಆಗ ನೀರು, ಮಾತ್ರೆಯನ್ನು ತರಲು ಹೇಳಿದೆ. ನಾನೇ ಮಾತ್ರೆಯನ್ನು ಕೊಟ್ಟರೆ ಹುಡುಗ ತಿನ್ನಬಹುದೆಂದು ನನಗೆ ತೋರಿತ್ತು.

ನನ್ನ ಕೈಗೆ ಬಂದ ನೀರಿನ ನೋಟವನ್ನು ನೋಡುತ್ತಿದ್ದಂತೆ ದೊಡ್ಡ ಹುಡುಗ ಮುಖವನ್ನು ಕಿವಿಚಿಕೊಂಡು ಗಂಟಲನ್ನು ಯಾಕೋ ಒತ್ತಿದ ಹಾಗೆ ಮಾಡಿ ಅಲ್ಲೇ ಕುಸಿದು ಬೀಳುವಂತಾದ. ಅಷ್ಟರಲ್ಲಿ ಆತನ ತಂದೆ ಅವನನ್ನು ಹಿಡಿದು ಮಲಗಿಸಿದರು. ಇದನ್ನು ನೋಡುತ್ತಿದ್ದಂತೆ ನನ್ನ ಅನುಭವ ಒಂದು ನೆನಪಿಗೆ ಬಂದು ಶಾಕ್ ಆದೆ.

'ನಾನು ಮೆಡಿಕಲ್ ಕಾಲೇಜಿನಲ್ಲಿ ಜೂನಿಯರ್ ಡಾಕ್ಟರ್ ಆಗಿ ಕೆಲಸ ಮತ್ತು ಕಲಿಯುತ್ತಿರುವ ಸಮಯ. ಬೆಳಗ್ಗೆ ಓಪಿಡಿಯಲ್ಲಿ ಕೆಲಸ, ಸಂಜೆ ಹೊಸ ರೋಗಿಗಳ ಕೇಸ್ ಹಿಸ್ಟರಿ ರೆಡಿ ಮಾಡಬೇಕಿತ್ತು. ವಾರ್ಡಿಗೆ ಬಂದ ಪ್ರೊಫೆಸರ್ ಅದನ್ನು ನೋಡಿ ನಮಗೆ ಪರೀಕ್ಷಾ ವಿಧಾನವನ್ನು, ರೋಗಿಗಳಿಗೆ ಔಷದೋಪಚಾರದ ಸಲಹೆಯನ್ನು ಹೇಳುತ್ತಿದ್ದರು. ಒಂದು ದಿನ ನಮ್ಮ ಪ್ರೊಫೆಸರ್, ಸುಮಾರು 30–35 ವರ್ಷದ ಜ್ವರದ ರೋಗಿಯನ್ನು ಅಡ್ಮಿಟ್ ಮಾಡಿ ಆತನ ಕೇಸ್ ಶೀಟ್ ಸಿದ್ಧಪಡಿಸುವಂತೆ ಸೂಚಿಸಿದರು. ಸಂಜೆ ನಾಲ್ಕು ಗಂಟೆಗೆ ಆತನ ಕಾಯಿಲೆಯ

ವಿವರವನ್ನು ಪಡೆದು, ರಕ್ತ ಪರೀಕ್ಷೆಯನ್ನು ಮಾಡಿ ಕೇಸ್‌ಶೀಟ್ ಸಿದ್ಧಪಡಿಸಿದೆ. ಕೈ ತೊಳೆಯುವುದಕ್ಕಾಗಿ ಆತನ ಬೆಡ್ ಪಕ್ಕದಲ್ಲಿರುವ ವಾಶ್ ಬೇಸಿನ್ ಕಡೆ ಹೋದೆ. ನಲ್ಲಿಯಿಂದ ನೀರು ಬರಲು ಪ್ರಾರಂಭವಾದ ಕೂಡಲೇ ಆ ರೋಗಿಯ ಮುಖದಲ್ಲಿ ತೀವ್ರವಾದ ಬದಲಾವಣೆಯಾಯಿತು. ಗಂಟಲನ್ನು ತಿರುಚಿಕೊಂಡಂತೆ ಮಾಡತೊಡಗಿದ. ಆಗ ಪಕ್ಕದ ಹಾಸಿಗೆಯಲ್ಲಿ ಮಲಗಿದವರನ್ನು ವಿಚಾರಿಸಿದೆ, ಆ ರೋಗಿ ಬೆಳಗ್ಗೆಯಿಂದಲೂ ಹಾಗೆ ಮಾಡುತ್ತಿರುವುದಾಗಿ ಹೇಳಿದರು. ಅಷ್ಟೇ ಅಲ್ಲದೆ ಊಟ ಮಾಡುವುದಿರಲಿ, ಒಂದು ಗುಟುಕು ನೀರನ್ನೂ ಸೇವಿಸಿಲ್ಲ ಎಂಬ ವಿಚಾರವೂ ತಿಳಿಯಿತು. ತಕ್ಷಣ ನನ್ನ ಓದು ನನಗೆ ಸಹಾಯ ಮಾಡಿತು, ರೇಬಿಸ್ ಕಾಯಿಲೆಯ ಕ್ಲಿನಿಕಲ್ ಲಕ್ಷಣಗಳು ಆತನಲ್ಲಿ ಗೋಚರಿಸಿತು. ಆದರೆ ಈ ತನಕ ನಾನು ರೇಬಿಸ್ ರೋಗಿಯನ್ನು ನೋಡಿದ ಅನುಭವ ಇಲ್ಲವಾಗಿತ್ತು. ಹಾಗಾಗಿ ನನ್ನ ಸ್ನೇಹಿತ, ಡಾ. ರೆಡ್ಡಿಯವರನ್ನು ಕರೆದು ಸಹಾಯವನ್ನು ಪಡೆದುಕೊಂಡೆ. ರೆಡ್ಡಿಯವರಿಗೆ ರೋಗಿಯ ಲಕ್ಷಣವನ್ನು ತೋರಿಸಿದೆ. ಆಮೇಲೆ ನಿಧಾನವಾಗಿ ರೋಗಿಯಲ್ಲಿ "ನಿಮಗೆ ಇತ್ತೀಚೆಗೆ ನಾಯಿ ಕಡಿದಿದೆಯಾ?" ಎಂದು ಕೇಳಿದೆ. ಆತ, "ಹೌದು ಸ್ವಾಮಿ, ಈಗ ಒಂದು ತಿಂಗಳ ಹಿಂದೆ ಒಂದು ನಾಯಿ ಕಡಿದಿತ್ತು. ಅದು ಹುಚ್ಚು ನಾಯಿ ಅಲ್ಲ, ಸರಿಯಾಗಿರುವ ನಾಯಿಯೆ ಆಗಿತ್ತು. ಆದರೆ ಒಂದು ವಾರದ ನಂತರ ಆ ನಾಯಿ ಕಾಣಿಸಲೇ ಇಲ್ಲ, ನನಗೂ ಬೇರೇನೂ ತೊಂದರೆ ಆಗಲಿಲ್ಲ, ಗಾಯವೂ ವಾಸಿಯಾಯ್ತು. ಕೆಲಸದ ಮಧ್ಯೆ ಬಿಡುವಾಗದೆ ಇಂಜೆಕ್ಷನ್ ತೆಗೆದುಕೊಳ್ಳಲಿಲ್ಲ" ಎಂದು ವಿವರಿಸಿದ.

ಸಂಜೆ ನಮ್ಮ ಪ್ರೊಫೆಸರ್ ಬಂದಾಗ ಈ ವಿವರವನ್ನು ಅವರಿಗೆ ನೀಡಿದೆ. ಅವರು ಕೂಡಲೇ ಬೇಸಿನ್‌ನಲ್ಲಿ ನೀರನ್ನು ಬಿಟ್ಟು ಪರೀಕ್ಷಿಸಿದರು. ಆದರೆ ಅವರಿಗೂ ಈ ಹಿಂದೆ ರೇಬಿಸ್ ರೋಗಿಯನ್ನು ನೋಡಿದ ಅನುಭವ ಇರಲಿಲ್ಲ. ಓದಿದ ಆಧಾರದ ಮೇಲೆ ಇದು ಹೈಡ್ರೋಫೋಬಿಯ (Hydrophobia) ಎಂಬ ನಿರ್ಣಯಕ್ಕೆ ಬಂದು, ಆ ರೋಗಿಯನ್ನು ಐಸೋಲೇಶನ್ ಆಸ್ಪತ್ರೆಗೆ ಸ್ಥಳಾಂತರಿಸಿದರು.

ಮನುಷ್ಯನಿಗೆ ಈ ರೇಬಿಸ್ ರೋಗಾಣು, ರೇಬಿಸ್ ರೋಗ ತಗುಲಿದ ನಾಯಿ, ಬೆಕ್ಕು, ಮಂಗ ಮುಂತಾದ ಪ್ರಾಣಿಗಳಿಂದ ಕಚ್ಚಿಸಿಕೊಂಡಾಗ ಬರುತ್ತದೆ. ಪ್ರಾಣಿಗಳ ಮೈಯನ್ನು ಸೇರಿದ ಈ ರೇಬೀಸ್ ವೈರಸ್ ಮೆದುಳನ್ನು ಸೇರುತ್ತದೆ. ಅಲ್ಲಿಂದ ಜೊಲ್ಲು ಗ್ರಂಥಿಗೆ ಬರುತ್ತದೆ. ಆ ಪ್ರಾಣಿಗಳು ಕಚ್ಚಿದವರ ದೇಹಕ್ಕೆ ಜೊಲ್ಲಿನ ಮೂಲಕ ಪ್ರಸಾರವಾಗುತ್ತದೆ. ಗಾಯಕ್ಕೆ ಸೇರಿದ ರೇಬಿಸ್ ರೋಗಾಣು ನಿಧಾನವಾಗಿ ಮೆದುಳನ್ನು ಸೇರುತ್ತದೆ. ಅಲ್ಲಿ ದೃಢವಾಗಿ ಕುಳಿತು, ಗಂಟಲಿನಲ್ಲಿ ನುಂಗುವ ಖಂಡಗಳ ಮೇಲೆ ಪ್ರಭಾವ ಬೀರತೊಡಗುತ್ತದೆ.

ನುಂಗುವ ಕ್ರಿಯೆಗೆ ಅಡ್ಡಿಪಡಿಸುತ್ತದೆ. ನೋವು ಪ್ರಾರಂಭವಾಗುತ್ತದೆ. ಆ ನೋವಿನ ತೀವ್ರತೆಯಿಂದಲೊ ಏನೋ, ರೋಗಿ ನೀರನ್ನು ನೋಡಿದಾಕ್ಷಣ

ಹೆದರಲು ಆ ಪ್ರಾರಂಭಿಸುತ್ತಾನೆ. ಇದನ್ನು ಹೈಡ್ರೋಫೋಬಿಯ ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ನಾಯಿ ಕಚ್ಚಿದ ಅಥವಾ ರೇಬಿಸ್ ತಾಗಿದ ಹತ್ತು ದಿನಗಳಿಂದ ಒಂದು ವರ್ಷದವರೆಗೂ ಈ ರೋಗ ಕಾಣಿಸಿಕೊಳ್ಳುತ್ತದೆ ಹಾಗಾಗಿ ಈ ಸಮಯವನ್ನು ಇನ್ಕ್ಯುಬೇಷನ್ ಪಿರಿಯಡ್ ಎಂದು ಕರೆಯುತ್ತಾರೆ. ಹೀಗೆ ರೇಬಿಸ್ ಮೆದುಳನ್ನು ಸೇರಿದರೆ ಅಲ್ಲಿನ ನರಗಳಲ್ಲಿ ಇನ್ಫೆಕ್ಷನ್ ಹಬ್ಬುತ್ತದೆ. ತದನಂತರ ಅದಕ್ಕೆ ಯಾವ ಚಿಕಿತ್ಸೆಯೂ ಇಲ್ಲ. ಅದಕ್ಕಾಗಿ ಮುಂಜಾಗ್ರತಾ ಕ್ರಮಗಳನ್ನು ಕಡ್ಡಾಯವಾಗಿ ಪಾಲಿಸಬೇಕು. ರೇಬಿಸ್ ಇರುವ ಪ್ರಾಣಿಗಳು ಕಚ್ಚಿದ ಕೂಡಲೇ ವ್ಯಾಕ್ಸಿನೇಷನ್ ತೆಗೆದುಕೊಳ್ಳಬೇಕು.

ನಾನು, ಶ್ರೀನಿವಾಸರಾಯರ ಚಿಕ್ಕ ಹುಡುಗನಿಗೂ ನೀರನ್ನು ಕುಡಿಸಿ ನೋಡಿದೆ ಆತನಿಗೆ ಯಾವ ತೊಂದರೆಯೂ ಇರಲಿಲ್ಲ. ಮತ್ತೆ ಮೂತ್ರದ ಇನ್ಫೆಕ್ಷನ್‌ನಿಂದ ಆತನಿಗೆ ಜ್ವರವಿದೆ ಎಂಬುದನ್ನು ತಿಳಿದುಕೊಂಡೆ. ಸೂಕ್ತ ಔಷಧೋಪಚಾರದಿಂದ ಮುಂದೆ ಮೂರು ನಾಲ್ಕು ದಿವಸದಲ್ಲಿ ಆತನಿಗೆ ಗುಣವಾಯಿತು.

ನಾನು ಕಲಿಯುವಾಗ ನೋಡಿದ ರೇಬಿಸ್ ರೋಗಿಯ ಲಕ್ಷಣಗಳೆಲ್ಲ ಶ್ರೀನಿವಾಸರ ದೊಡ್ಡ ಮಗನಲ್ಲಿ ಕಂಡಿತ್ತು. ನಿಧಾನವಾಗಿ, "ಹುಡುಗನಿಗೆ ನಾಯಿ ಏನಾದರೂ ಕಚ್ಚಿತ್ತಾ?" ಎಂದು ಕೇಳಿದೆ. ಹುಡುಗನ ತಾಯಿ, "ಎರಡು ತಿಂಗಳ ಹಿಂದೆ ಒಂದು ನಾಯಿ ಕಚ್ಚಿತ್ತು", ಎಂದರು. ನನ್ನ ನಿರ್ಣಯ ಸರಿಯಾಗಿತ್ತು. ಉಳಿದಂತೆ ವ್ಯಾಕ್ಸಿನೇಷನ್ ಬಗ್ಗೆ ಕೇಳಿದೆ ಏಳು ದಿನ ಉಡುಪಿಗೆ ಹೋಗಿ ಇಂಜೆಕ್ಷನ್ ಕೊಡಿಸಿದ್ದರು. ಆನಂತರ ಊರಿನಲ್ಲಾದ ವಿಪರೀತ ಮಳೆಯಿಂದ ಹೋಗಲಾಗದೆ ವ್ಯಾಕ್ಸಿನೇಷನ್ ಅರ್ಧಕ್ಕೆ ನಿಂತು ಹೋಗಿತ್ತು.

ಆ ಕಾಲವೂ ಹಾಗೆಯೇ ಇತ್ತು. ಹತ್ತಿರದಲ್ಲಿ ವ್ಯಾಕ್ಸಿನ್ ಸಿಗುತ್ತಿರಲಿಲ್ಲ. ಸರ್ಕಾರಿ ಆಸ್ಪತ್ರೆ ಇದ್ದ ಉಡುಪಿಗೆ ಹೋಗಬೇಕಿತ್ತು. ರೋಗ ಕೈ ಮೀರಿತ್ತು, ಇನ್ನು ಯಾವ ವೈದ್ಯಕೀಯವು ಮಗುವನ್ನು ಬದುಕಿಸಲು ಸಾಧ್ಯವಿರಲಿಲ್ಲ. ಶ್ರೀನಿವಾಸರ ಮನೆ ಕತ್ತಲಾದಂತೆ ಅನ್ನಿಸಿತು. ಮುಂದಿನ ಸನ್ನಿವೇಶಗಳೆಲ್ಲ ಕಣ್ಮುಂದೆ ಹಾದು ಹೋಯಿತು. ಕ್ಲಿನಿಕ್ಕಿಗೆ ಬಂದ ಮೇಲೆ ಶ್ರೀನಿವಾಸರಿಗೆ ರೇಬಿಸ್ ಖಾಯಿಲೆಯ ವಿವರವನ್ನು ನೀಡಿದೆ. ಕೂಡಲೇ ಸರ್ಕಾರಿ ಐಸೋಲೇಶನ್ ಆಸ್ಪತ್ರೆಗೆ ಸೇರಿಸುವಂತೆ ಹೇಳಿದೆ.

ಒಂದು ವಾರದಲ್ಲಿ ಮಗು ಸರ್ಕಾರಿ ಆಸ್ಪತ್ರೆಯಲ್ಲಿ ಅಸುನೀಗಿತು. ಈ ರೇಬಿಸ್ ರೋಗದ ಲಕ್ಷಣವನ್ನೆಲ್ಲ ಓದಿಕೊಂಡ ಅನೇಕ ವೈದ್ಯರಿಗೆ ತಮ್ಮ ಸೇವಾ ಅವಧಿಯಲ್ಲಿಯೇ ಈ ರೋಗಿಯನ್ನು ನೋಡುವ ಅವಕಾಶ ಬರುವುದಿಲ್ಲ. ಆದರೆ ನನಗೆ ಪ್ರತ್ಯಕ್ಷವಾಗಿ ಎರಡೆರಡು ರೋಗಿಗಳನ್ನು ನೋಡುವ ಸಂದರ್ಭ ಬಂತೆಂದು ವಿಷಾದಿಸಬೇಕೊ ಅಥವಾ ವೃತ್ತಿಗೆ ಸಂಬಂಧಿಸಿದಂತೆ ಸಂತೋಷಪಡಬೇಕೋ ಎಂಬ ದ್ವಂದದಲ್ಲಿ ಸಿಲುಕಿದ್ದೇನೆ.

# ಹೊಟ್ಟೆನೋವು ಮೊಳೆಯಿತು

ಇದು ಸಂಭವಿಸಿ ಇಪ್ಪತ್ತು ಇಪ್ಪತ್ತೈದು ವರ್ಷಗಳೇ ಆಗಿರಬಹುದೆಂದು ನೆನಪು. ಲಕ್ಷ್ಮಿ ಎನ್ನುವ ಬಡ ಮಹಿಳೆಯೊಬ್ಬಳು ಅಪರೂಪಕ್ಕೊಮ್ಮೆ ನನ್ನಲ್ಲಿಗೆ ತಪಾಸಣೆಗಾಗಿ ಬರುತ್ತಿದ್ದಳು. ಆಕೆ ಒಂದು ಚಿಕ್ಕ ಫ್ಯಾಕ್ಟರಿಯಲ್ಲಿ ಕೆಲಸ ಮಾಡಿಕೊಂಡಿದ್ದ ನೆನಪು. ಹಾಗೆ ಅವಳ ನಾಲ್ಕೈದು ವರ್ಷ ವಯಸ್ಸಿನ ಹುಡುಗನನ್ನು ಅಪರೂಪಕ್ಕೆ (ಏನಾದರೂ ಕಾಂಪ್ಲಿಕೇಟ್ ಎನಿಸಿದಾಗ) ನನ್ನಲ್ಲಿಗೆ ಕರೆತರುತ್ತಿದ್ದಳು. ಅಂದರೆ ಮಾಮೂಲಾಗಿ ಅಕ್ಕಪಕ್ಕದ ಇತರ ವೈದ್ಯರಲ್ಲಿ ಚಿಕಿತ್ಸೆ ಪಡೆದುಕೊಂಡು, ಸುಧಾರಣೆ ಕಾಣದಿದ್ದಾಗ ನನ್ನಲ್ಲಿಗೆ ಬರುವ ಕ್ರಮ. ಕಾರಣ ನನ್ನ 20/– ರೂ ಫೀಸು ಆಕೆಗೆ ದುಬಾರಿ ಎನ್ನಿಸಿತ್ತು.

ಹಾಗೆ ಒಂದು ದಿನ ಆಕೆ ತನ್ನ ಮಗನನ್ನು ಕರೆತಂದು, "ಡಾಕ್ಟ್ರೇ ನನ್ನ ಮಗನಿಗೆ ಹದಿನೈದು ದಿನಗಳಿಂದ ಹೊಟ್ಟೆ ನೋವು ಬರ್ತಾ ಇದೆ. ಮನೆ ಹತ್ತಿರದ ವೈದ್ಯರಿಗೆ ತೋರಿಸಿದಾಗ, ಹೊಟ್ಟೆ ಹುಳವಿರಬಹುದು ಎಂದು ಔಷದ ಕೊಟ್ಟರು. ಆದರೆ ಕಡಿಮೆಯಾಗಲಿಲ್ಲ. ಇನ್ನೊಬ್ಬ ವೈದ್ಯರು, ಇನ್ಫೆಕ್ಷನ್ ಆಗಿದೆ ಎಂದು ಸಿರಪ್ ಬರೆದುಕೊಟ್ಟರು. ಅದರಿಂದಲೂ ಕಡಿಮೆ ಆಗಲಿಲ್ಲ. ಏನಾಗಿದೆ ಅಂತ ಸ್ವಲ್ಪ ನೋಡ್ತೀರಾ? ಹಾಗೆ ಬೇರೆ ಏನಾದರೂ ಟೆಸ್ಟ್ ಮಾಡಿಸಬೇಕಾ?"ಎಂದು ಕೇಳಿದಳು.

ಚಿಕ್ಕ ಮಕ್ಕಳಲ್ಲಿ ಹೊಟ್ಟೆ ನೋವು ಕಾಣಿಸಿದಾಗ ರೋಗ ನಿರ್ಣಯಿಸುವುದು ಬಹಳ ಕಷ್ಟದ ಕೆಲಸ. ಏಕೆಂದರೆ ಮಕ್ಕಳು ರೋಗಲಕ್ಷಣದ ಬಗ್ಗೆ ಸ್ಪಷ್ಟ ಮಾಹಿತಿ ನೀಡಲು ಅಸಮರ್ಥರಾಗಿರುತ್ತಾರೆ. ಹಾಗೇ, ತಾಯಂದಿರ ಮಾಹಿತಿಯು ಸ್ಪಷ್ಟವಾಗಿರುವುದಿಲ್ಲ.

"ಏನಮ್ಮಾ, ಹದಿನೈದು ದಿನಗಳಿಂದ ಹೊಟ್ಟೆ ನೋವು ಅಂತಿದ್ದೀಯಾ, ಸಾಧಾರಣ ಹೊಟ್ಟೆ ನೋವಿಗೆ ಸಂಬಂಧಿಸಿದ ಔಷಧಿಗಳನ್ನೆಲ್ಲ ನಿನ್ನ ಡಾಕ್ಟರ್‌ಗಳು ಈಗಾಗಲೇ ನೀಡಿದ್ದಾರೆ. "ಎಂದು ಅವಳು ತೋರಿಸಿದ ಔಷಧ ಚೀಟಿಗಳನ್ನು ಪರೀಕ್ಷಿಸಿ ಹೇಳಿದೆ. "ಹಾಗೆ ಹೊಟ್ಟೆ ನೋವು ಬಂದಾಗ ಭೇದಿ ಆಗುವುದೇ?" ಎಂದು ಕೇಳಿದೆ.

"ಒಂದೊಂದು ಬಾರಿ ಹೋಗುತ್ತಾನೆ, ಕೆಲವೊಮ್ಮೆ ಬರೆ ಹೊಟ್ಟೆ ನೋವು ಇರುತ್ತದೆ" ಎಂದಳು. ಆಕೆಯಿಂದ ಪಡೆದ ಪ್ರಿಸ್ಕ್ರಿಪ್ಷನ್ ಲೆಟರ್‌ಗಳಲ್ಲಿ, ಅಮೀಬಿಕ್ ಇನ್ಫೆಕ್ಷನ್‌ಗೆ ಏನೊಂದೂ ಚಿಕಿತ್ಸೆ ಪಡೆಯದ ಮಾಹಿತಿ ದೊರೆಯಿತು. ಹಾಗಾಗಿ

ಅಮೀಬಿಕ್ ಇನ್ಫೆಕ್ಷನ್‌ಗೆ ಸಿರಪ್ ಹಾಗೂ ಹೊಟ್ಟೆ ನೋವಿನ ಸಿರಪ್ ಬರೆದು, ಐದು ದಿನಗಳ ನಂತರ ಬರುವಂತೆ ಹೇಳಿದೆ.

ಆದರೆ ಮೂರ್ನಾಲ್ಕು ದಿನಗಳಲ್ಲಿಯೇ ಲಕ್ಷ್ಮಿ ಮಗನೊಂದಿಗೆ ಕ್ಲಿನಿಕ್ಕಿಗೆ ಬಂದಿದ್ದಳು. ಈ ಬಾರಿ ಪ್ರಮೋದನಿಗೆ ಜ್ವರ ಬಂದಿತ್ತು. ಹಾಗೂ ಹೊಟ್ಟೆ ನೋವು ಇನ್ನೂ ಜಾಸ್ತಿಯಾಗಿತ್ತು. ಜ್ವರ, ಹೊಟ್ಟೆ ನೋವಿಗೆ ಸಂಬಂಧಿಸಿದಾಗಿರಲಿಕ್ಕಿಲ್ಲ, ವೈರಲ್ ಫೀವರ್ ಇರಬಹುದು ಎಂದುಕೊಂಡೆ. ಪರೀಕ್ಷಿಸಿದರೆ ಕಾರಣ ತಿಳಿಯಲಿಲ್ಲ, ಹೊಟ್ಟೆಯನ್ನು ಪರೀಕ್ಷಿಸುತ್ತಾ ಹೊಕ್ಕಳಿನ ಎಡ ಭಾಗದಲ್ಲಿ ಒತ್ತಿದಾಗ, ಜಾಸ್ತಿ ನೋವು ಆ ಭಾಗದಲ್ಲಿ ಕಂಡುಬಂದಿತು. ಎಡಭಾಗದಲ್ಲಿ, ಎಡಮೂತ್ರ ಕೋಶವಿರುವ ಜಾಗದಲ್ಲಿ ನೋವು ಕಾಣಿಸಿಕೊಂಡಿದೆ ಎಂದರೆ ಬಹುಶಃ ಮೂತ್ರಕೋಶದ ಇನ್ಫೆಕ್ಷನ್ ಇರಬಹುದು, ಅದಕ್ಕೆ ಜ್ವರ ಬಂದಿರಬಹುದು ಎಂಬ ಸಂಶಯ ಕಾಣಿಸಿತು.

"ನೋಡಮ್ಮಾ, ಒಂದು ಮೂತ್ರ ಪರೀಕ್ಷೆ ಮಾಡಿಸಿಕೊಂಡು ಬಾ" ಎಂದು ಲಕ್ಷ್ಮಿಗೆ ತಿಳಿಸಿದೆ.

ಲಕ್ಷ್ಮಿ ಮರುದಿನ, ಮೂತ್ರ ಪರೀಕ್ಷೆಯ ರಿಪೋರ್ಟ್‌ನೊಂದಿಗೆ ಬಂದಳು. ಹೌದು ಮೂತ್ರ ಪರೀಕ್ಷೆಯಲ್ಲಿ, ಮೂತ್ರದ ಇನ್ಫೆಕ್ಷನ್ ಇದೆ ಎಂದು ತಿಳಿಸಿದರು. ಮೈಕ್ರೋಸ್ಕೋಪಿಕ್ ಪರೀಕ್ಷೆಯಲ್ಲಿ ಪೆಸ್‌ಸೆಲ್ಸ್, ಸಾಮಾನ್ಯಕ್ಕಿಂತ ಜಾಸ್ತಿ ಇತ್ತು. ಸರಿ ಅದಕ್ಕೆ ಸಂಬಂಧಿಸಿದ ಔಷಧ ಬರೆದು ಕೊಟ್ಟೆ. ಆದರೂ ಆಕೆಗೆ, "ನಿನ್ನ ಮಗನ ಹೊಟ್ಟೆಯ ಅಲ್ಟ್ರಾ ಸೌಂಡ್ ಸ್ಕ್ಯಾನಿಂಗ್ ಮಾಡಿದರೆ ಉತ್ತಮ. ಏನಾದರೂ ರೋಗ ಪತ್ತೆ ಆಗಬಹುದು" ಎಂದು ಹೇಳಿದೆ. ಆ ಸಮಯದಲ್ಲಿ ಈ ಟೆಸ್ಟ್‌ಗೆ ಐದುನೂರು ರೂಪಾಯಿ ಶುಲ್ಕ ವಿಧಿಸುತ್ತಿದ್ದರು. ಲಕ್ಷ್ಮಿಗೆ ಅದು ಬಹಳ ದುಬಾರಿ ಚಿಕಿತ್ಸೆ ಅನ್ನಿಸಿ, "ಎಕ್ಸರೇ ಮಾಡಿಸಿದರೆ ಸಾಲದೇ?" ಎಂದು ಪ್ರಶ್ನಿಸಿದಳು.

"ಸರಿ ಅದಾದರೂ ಮಾಡಿಸಿಕೊಂಡು ಬಾ" ಎಂದು ಎಕ್ಸರೇಗೆ ಬರೆದು ಕೊಟ್ಟೆ. ಎಕ್ಸರೇಯಿಂದ ರೋಗ ಪತ್ತೆಯಾಗುವ ಸಾಧ್ಯತೆ ಕಡಿಮೆ ಎನ್ನುವ ಭಾವನೆ ನನ್ನದಾಗಿತ್ತು.

ಮಾರನೇ ದಿನ ಲಕ್ಷ್ಮಿ ಮಗನ ಎಕ್ಸ್‌ರೇ ರಿಪೋರ್ಟ್‌ನೊಂದಿಗೆ ಬಂದಳು. ಎಕ್ಸ್‌ರೇ ನೋಡುತ್ತಿದ್ದಂತೆ ನನಗೆ ಆಶ್ಚರ್ಯದೊಂದಿಗೆ ಆಘಾತವಾಯಿತು. ಅದನ್ನು ನೋಡಿದಾಗ, 'ಹುಡುಗನ ಹೊಟ್ಟೆಯ ಹೊಕ್ಕಳಿನ ಎಡ ಭಾಗದಲ್ಲಿ, ಮೂತ್ರಕೋಶದಿಂದ ಸ್ವಲ್ಪ ಕೆಳಗಡೆ, ಒಂದು ಇಂಚಿನ ಅಳತೆಯ ಕಬ್ಬಿಣದ ಮೊಳೆಯ ಚಿತ್ರ ಬಂದಿದೆ. ಅರೇ! ಎಕ್ಸರೇ ತೆಗೆಯುವಾಗ ಏನಾದರೂ, ಅಚಾತುರ್ಯದಿಂದ ಮೊಳೆ ಬಂದು ಪ್ರಮೋದನ ಬೆನ್ನು ಹಾಗೂ ಎಕ್ಸರೇ ಪ್ಲೇಟ್ ಮಧ್ಯೆ ಸೇರಿ ಹೀಗಾಗಿರಬಹುದೇ? ಎಂಬ ಸಂದೇಹ ಕಾಡಿದರೂ, ಹಾಗಾಗಲು ಸಾಧ್ಯವೇ ಇಲ್ಲ, ಹುಡುಗ ಯಾವಾಗಲೋ ಈ ಮೊಳೆಯನ್ನು

ನುಂಗಿದ್ದಾನೆ' ಎನ್ನುವ ತೀರ್ಮಾನಕ್ಕೆ ಬರಬೇಕಾಯಿತು. ಆದರೆ ಈ ವಿಚಾರ ತಾಯಿಗೆ ತಿಳಿದಿರಲಿಲ್ಲ. ಹೆಚ್ಚಿನ ಸಂದರ್ಭಗಳಲ್ಲಿ ಇಂತಹ ವಸ್ತುಗಳು, ಹೊಟ್ಟೆ, ಸಣ್ಣ ಕರುಳು, ದೊಡ್ಡ ಕರುಳನ್ನು ಹಾದು ಮಲವಿಸರ್ಜನೆಯಲ್ಲಿ ಹೊರಬರುತ್ತದೆ. ಆದರೆ ಪ್ರಮೋದನ ದುರಾದೃಷ್ಟಕ್ಕೆ ಹಾಗಾಗದೆ, ಅದು ಸಣ್ಣ ಕರುಳನ್ನು ತೂರಿ ಹೊಟ್ಟೆಯ ಅಂಗಾಂಶದ ಮೂಲಕ, ಮೂತ್ರಕೋಶದ ಹತ್ತಿರ ಬಂದಿತ್ತು. "ಈಗ ಇದನ್ನು ತೆಗೆಯಲು ಶಸ್ತ್ರ ಚಿಕಿತ್ಸೆ ಮಾಡಿಸಬೇಕಾಗುತ್ತದೆ" ಎಂದು ಲಕ್ಷ್ಮೀಗೆ ತಿಳಿಸಿದೆ. ಆಕೆಗೆ ಆಕಾಶವೇ ತಲೆ ಮೇಲೆ ಬಿದ್ದಂತಾಗಿತ್ತು. "ಸರ್ಕಾರಿ ಆಸ್ಪತ್ರೆಗೆ ಲೆಟರ್ ಬರೆದುಕೊಡುತ್ತೇನೆ, ಅಲ್ಲಿಯೇ ಮಾಡಿಸಿದರೆ ಕಡಿಮೆ ಖರ್ಚಿನಲ್ಲಿ ಆಗುತ್ತದೆ"ಎಂದು ಲೆಟರ್ ಬರೆದು ಕೊಟ್ಟೆ.

"ಸರ್, ಸರ್ಕಾರಿ ಆಸ್ಪತ್ರೆಯಾದರು ಡಾಕ್ಟರಿಗೆ ಹಣ ಕೊಡಬೇಕು, ಹಾಗೆ ಬರೆದುಕೊಟ್ಟ ಔಷಧಗಳಿಗೆ ಹಣ ಬೇಕು. ಇದಕ್ಕೆಲ್ಲಾ ಹಣ ಹೊಂದಿಸಿಕೊಂಡು ಆಸ್ಪತ್ರೆಗೆ ಹೋಗಬೇಕಾಗುತ್ತದೆ ಎಂದಳು. "ಸದ್ಯಕ್ಕೆ ನೋವು, ಜ್ವರ ಕಡಿಮೆಯಾಗಲು ಔಷಧ ಕೊಡುತ್ತೇನೆ, ಆದರೆ ನೀನು ಒಂದೆರಡು ದಿನಗಳಲ್ಲಿಯೇ ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕು" ಎಂದು ಪರಿಸ್ಥಿತಿಯ ಗಂಭೀರತೆಯ ಬಗ್ಗೆ ಎಚ್ಚರಿಸಿ ಹೇಳಿದೆ.

ಮಾರನೇ ದಿನವೇ ಲಕ್ಷ್ಮಿ ಮಗನನ್ನು ಕರೆತಂದು, ಆತನ ಬೆನ್ನು ತೋರಿಸಿದಳು. ಬೆನ್ನಿನ ಎಡ ಭಾಗದಲ್ಲಿ, ಮೂತ್ರಕೋಶ ಇರುವ ಭಾಗದಲ್ಲಿ ಊತ ಕಾಣಿಸಿಕೊಂಡಿತ್ತು. ಬಹುಶಃ ಕೀವು ತುಂಬಿ ಮೊಳೆ ಆ ಕಡೆ ಮುಖವಾಗಿ ನಿಧಾನವಾಗಿ ಚಲಿಸುತ್ತಿತ್ತು. ಕೂಡಲೇ ಮಗುವನ್ನು ಆಸ್ಪತ್ರೆಗೆ ಕೊಂಡೊಯ್ಯುವಂತೆ ಸೂಚಿಸಿದೆ.

ಇದಾಗಿ 15 ದಿನಗಳ ನಂತರ ಆಕೆ ಮಗನೊಂದಿಗೆ ನನ್ನ ಕ್ಲಿನಿಕ್ಕಿಗೆ ಬಂದಿದ್ದಳು. ಬೆನ್ನಿನ ಶಸ್ತ್ರ ಚಿಕಿತ್ಸೆಯ ಗಾಯ ಮಾಸಿತ್ತು. ಪುಣ್ಯವಶಾತ್ ಮಗು ಶಸ್ತ್ರಚಿಕಿತ್ಸೆಯಿಂದಾಗಿ ಬದುಕು ಉಳಿಯಿತು. ನನಗಿರುವ ಸಂಶಯವೆಂದರೆ, 'ಮೂತ್ರದ ಪರೀಕ್ಷೆಯಲ್ಲಿ ಮೂತ್ರಕೋಶದ ಇನ್ಫೆಕ್ಷನ್ ಎಂದು ಹೇಗೆ ರಿಪೋರ್ಟ್ ಬಂದಿರಬಹುದು?' ಎಂಬುದಾಗಿತ್ತು. 'ಮೂತ್ರಕೋಶದ ಸುತ್ತಲಿನ ಅಂಗಾಂಶಗಳು ಇನ್ಫೆಕ್ಷನ್‌ಗೆ ಒಳಗಾದ ಕಾರಣ ಮೂತ್ರಕೋಶವು ಸಣ್ಣ ಪ್ರಮಾಣದಲ್ಲಿ ಇನ್ಫೆಕ್ಷನ್ ಗೆ ಗುರಿಯಾಗಿರಬಹುದು' ಎಂದು ಅರ್ಥೈಸಿಕೊಂಡೆ.

ಕೊನೆಯಲ್ಲಿ ಎಲ್ಲಾ ಸುಖಾಂತ್ಯವಾಯ್ತಲ್ಲ ಎನ್ನುವ ನೆಮ್ಮದಿ ದೊರಕಿದರೂ, ಲಕ್ಷ್ಮಿಗೆ ಮಾತ್ರ, ತನ್ನ ಮಗ ಎಲ್ಲಿ? ಯಾವಾಗ ಮೊಳೆ ನುಂಗಿದ್ದ? ಎನ್ನುವ ವಿಚಾರ ಗೊತ್ತೇ ಆಗಲಿಲ್ಲ.

# ರೋಗ ವರ್ತುಲ

ಕಾಯಿಲೆ ಗುಣವಾದ ಮೇಲೆ ರೋಗಿ ಆಸ್ಪತ್ರೆಯ ಕಡೆ ಮುಖ ಹಾಕುವುದಿಲ್ಲ. ಕೊಡುವ ಶುಲ್ಕವನ್ನು ಕೊಟ್ಟಾದ ಮೇಲೆ, ಕಾಯಿಲೆಯು ಗುಣವಾದ ಮೇಲೆ, ಅವನಿಗಾದರೂ ಆಸ್ಪತ್ರೆಯ ಉಸಾಬರಿ ಯಾಕೆ?! ಹಾಗಾಗಿ ಚಿಕಿತ್ಸೆಗಾಗಿ ಬಂದವರು, ಹಲವು ದಿನಗಳ ಕಾಲ ಕಾಣಿಸದಿದ್ದಲ್ಲಿ ರೋಗ ಗುಣವಾಗಿದೆ ಎಂದು ತಿಳಿದುಕೊಳ್ಳುತ್ತೇವೆ. ಆದರೆ ಕೆಲವು ರೋಗಿಗಳಿಗೆ ಔಷದ ಜಾದುವಿನಂತೆ ಕೆಲಸ ಮಾಡಬೇಕು. ಇಲ್ಲದಿದ್ದರೆ ಔಷಧವನ್ನು ಕೊಟ್ಟ ವೈದ್ಯರು ಸರಿ ಇಲ್ಲವೆಂದು ಭಾವಿಸಿ, ಇನ್ನೊಂದು ವೈದ್ಯರನ್ನು ನೋಡುತ್ತಾರೆ. ಅನೇಕರಿಗೆ ಇದೊಂದು ಮನಸ್ಸಿನ ರೋಗವೂ ಆಗಿದೆ. ರೋಗಿಗಳಿಗೆ ವೈದ್ಯರಲ್ಲಿ ನಂಬಿಕೆ, ಔಷಧಿಯ ಪರಿಣಾಮದಲ್ಲಿ ತಾಳ್ಮೆ ಇರಬೇಕು. ಕೆಲವರಲ್ಲಿ ಇರುತ್ತದೆ. ಹೀಗೆ ಈ ಎರಡು ವಿರುದ್ಧ ಗುಣಗಳಿರುವ ಅಣ್ಣ ತಮ್ಮಂದಿರು, ಅವರ ನಡುವೆ ವರ್ಷಾನುಗಟ್ಟಲೆ ರೋಗದಿಂದ ಬಳಲಿದ ಹೆಣ್ಣು ಮಗುವಿನ ಕಥೆ ಇಂತಿದೆ.

ಬೀದಿ ಬದಿಯ ವ್ಯಾಪಾರಿಯಾದ ಬಾಬು, ಕೆಮ್ಮು, ಜ್ವರ ಇತ್ಯಾದಿ ಸಣ್ಣಪುಟ್ಟ ಕಾಯಿಲೆಗಳಿಗೆ ನನ್ನಲ್ಲಿ ಬರುತ್ತಿದ್ದ. ಒಂದು ದಿನ ಹೆಂಡತಿ ಮತ್ತು ಮಗಳಾದ ಚೈತ್ರಾಳೊಂದಿಗೆ ಕ್ಲಿನಿಕ್ಕಿಗೆ ಬಂದ. ಏನೆಂದು ವಿಚಾರಿಸಿದಾಗ, ಮಗಳು ಚೈತ್ರಾಳ ಕಾಲಿಗೆ ಆದ ಸುಮಾರು ಹತ್ತು ಹದಿನೈದು ದಿವಸದಿಂದಲೂ ವಾಸಿಯಾಗದ ಗಾಯವನ್ನು ತೋರಿಸಿದ. ಶಾಲೆಯಲ್ಲಿ ಆಟವಾಡುವಾಗ ಎಡಗಾಲಿನ ಹಿಮ್ಮಡಿಯಲ್ಲಿ ಈ ಗಾಯವಾಗಿತ್ತು, ಎಂದು ತಿಳಿಸಿದರು. ಗಾಯವನ್ನು ಶುದ್ಧೀಕರಿಸಿ ಬ್ಯಾಂಡೇಜ್ ಹಾಕಿ ಔಷಧಿಯನ್ನು ತೆಗೆದುಕೊಳ್ಳಲು ತಿಳಿಸಿದೆ. ಗಾಯವನ್ನು ದಿನ ಬಿಟ್ಟು ದಿನ ಮನೆಯಲ್ಲಿಯೇ ಸ್ವಚ್ಛಗೊಳಿಸಲು ಹೇಳಿದೆ. ಒಂದು ವಾರದ ನಂತರ ಮತ್ತೆ ಕ್ಲಿನಿಕ್ಕಿಗೆ ಬರುವಂತೆ ಸೂಚಿಸಿದೆ.

ಒಂದು ವರ್ಷ ಕಳೆದರೂ ಬಾಬುವಿನ ಸುಳಿವು ಇರಲಿಲ್ಲಾ ಇದ್ದಕ್ಕಿದ್ದಂತೆ ಮಗಳೊಂದಿಗೆ ಒಂದು ದಿನ ಕ್ಲಿನಿಕ್ಕಿನಲ್ಲಿ ಬಾಬು ಪ್ರತ್ಯಕ್ಷನಾದ ನನಗೆ ಬಾಬುವಿನ ಮಗಳಾದ ಚೈತ್ರಾಳ ಕಾಲಿನ ಗಾಯದ ವಿಚಾರವೂ ಮರೆತು ಹೋಗಿತ್ತು. ಏನು ಡಾಕ್ಟ್ರೇ ನನ್ನ ಮಗಳ ಕಾಲಿನ ಗಾಯವನ್ನು ಗುಣಪಡಿಸಲೇ ಇಲ್ಲ ಎಂದು ತಗಾದೆ ತೆಗೆದ. ಕಾಯಿಲೆಯನ್ನು ಗುಣಪಡಿಸದಿದ್ದ ಮೇಲೆ ಮತ್ತೆ ಏಕೆ ಬಂದಿರಿ? ಎಂದು ನಗುತ ಕೇಳಿದೆ ಆಗ ಒಂದು ವರ್ಷದ ಇತಿಹಾಸ ಹೊರಬಿತ್ತು

ನಾನು ಚೈತ್ರಾಳಿಗೆ ಚಿಕಿತ್ಸೆಯನ್ನು ಕೊಟ್ಟ ಮೇಲೆ, ಒಂದೆರಡು ದಿನದಲ್ಲಿ

ಅಲ್ಲೇ ಹತ್ತಿರದ ಸರ್ಕಾರಿ ಆಸ್ಪತ್ರೆಗೆ ಅವಳನ್ನು ಕರೆದುಕೊಂಡು ಹೋದರು. ಅದಾದ ಮೇಲೆ ಬೇರೆ ಬೇರೆ ನಾಲ್ಕು ವೈದ್ಯರನ್ನು ಮತ್ತೆ ಭೇಟಿಯಾದರು. ಹಾಗೆ ಸ್ನೇಹಿತರೊ ಇನ್ಯಾರದೋ ಸಲಹೆಯಂತೆ ವಿಕ್ಟೋರಿಯಾ ಆಸ್ಪತ್ರೆಯ ಚರ್ಮರೋಗ ತಜ್ಞರಲ್ಲಿಗೂ ಹೋಗಿ ಬಂದಿದ್ದಾರೆ. ಅವರೆಲ್ಲರೂ ಒಂದೊಂದು ಟೆಸ್ಟ್‌ಗಳನ್ನು ಮಾಡಿಸಿ ಮಾತ್ರೆಗಳನ್ನು ಕೊಟ್ಟಿದ್ದಾರೆ. ಆದರೂ ಗಾಯ ವಾಸಿಯಾಗಲಿಲ್ಲ.

ಬಾಬುವಿನ ಅಣ್ಣ ಪಳನಿ ಅವರಿಗೆ ನನ್ನ ಮೇಲೆ ಅತೀವವಾದ ವಿಶ್ವಾಸ. ಪಳನಿ ಅವರು ಇರುವುದು ಯಲಹಂಕದಲ್ಲಿ. ಆದರೂ ಮಾಗಡಿ ರೋಡಿನಲ್ಲಿರುವ ನನ್ನ ಕ್ಲಿನಿಕ್ಕಿಗೆ ಚಿಕಿತ್ಸೆಗಾಗಿ ಬರುತ್ತಿದ್ದರು. ಅಷ್ಟೇ ಅಲ್ಲದೆ ಪಳನಿ ಅವರ ಮಗಳು ನಂದಿನಿ ಮದುವೆಯಾಗಿ ಮಹಾಲಕ್ಷ್ಮಿ ಲೇಔಟಿನಲ್ಲಿ ವಾಸವಿದ್ದಾಳೆ. ಅವಳು ಕೂಡ ಅಲ್ಲಿಂದ ಚಿಕಿತ್ಸೆಗಾಗಿ ಇಲ್ಲಿಗೆ ಬರುತ್ತಿದ್ದಳು. ಆ ಪಳನಿಯವರು ಒಮ್ಮೆ ಬಾಬುವಿನ ಮನೆಗೆ ಬಂದಾಗ, ಚೈತ್ರಾಳ ಕಾಲನ್ನು ನೋಡಿ, ಹಂದೆಯವರನ್ನು ಬಿಟ್ಟು ಬೇರೆ ಕಡೆ ಹೋಗಿದ್ದೇಕೆ ಎಂದು ತರಾಟೆಗೆ ತೆಗೆದುಕೊಂಡರಂತೆ. ಅಷ್ಟೇ ಅಲ್ಲದೆ ಪುನಃ ನನ್ನಲ್ಲಿಗೆ ಹೋಗುವಂತೆ ತಾಕಿತು ಮಾಡಿ ಕಳುಹಿಸಿದ್ದರು. ಅದರಿಂದ ಮುಜುಗರಗೊಂಡ ಬಾಬು, ನನ್ನಲ್ಲಿಗೆ ಬಂದು ಒಂದು ವರ್ಷ ಕಳೆದು ಹೋದರು, 'ನೀವು ನನ್ನ ಮಗಳ ಕಾಲಿನ ಗಾಯವನ್ನು ವಾಸಿ ಮಾಡಲಿಲ್ಲ' ಎಂದು ತಗಾದೆಯ ರೀತಿಯಲ್ಲಿ ಮಾತನಾಡಲು ಪ್ರಾರಂಭಿಸಿದ್ದ.

ನಾನು ಚೈತ್ರಾಳ ಕಾಲಿನ ಗಾಯವನ್ನು ತೋರಿಸಲು ಹೇಳಿದೆ. ಆಗ ಆದ ಗಾಯ ಈಗ ಒಂದರಿಂದ ಒಂದೂವರೆ ಇಂಚಿನಷ್ಟು ಅಗಲವಾದ ಹುಣ್ಣಾಗಿತ್ತು. ಆದರೆ ಗಾಯ ಕ್ಲೀನಾಗಿ ಇತ್ತು. ಈಗಾಗಲೇ ಅವರು ಹಲವು ವೈದ್ಯರನ್ನು ಸಂಪರ್ಕಿಸಿದ್ದರಿಂದ, ಮಾಡಬಹುದಾದ ಹಲವು ಟೆಸ್ಟ್‌ಗಳು ಆಗಿತ್ತು. ನನಗೆ ಅದರಿಂದ ಒಂದಷ್ಟು ಸುಲಭವೂ ಆಯಿತು. ಆ ಟೆಸ್ಟ್ ರಿಪೋರ್ಟ್‌ಗಳನ್ನು ನೋಡಿ, ಇದಾವುದೂ ಅಲ್ಲದ ಇನ್ನೊಂದು ಕಾಯಿಲೆಯ ಕಾರಣ ಏನು? ಎಂದು ಊಹಿಸುವುದಕ್ಕೆ ಅನುಕೂಲವಾಯಿತು.

ಚೈತ್ರಾಳಿಗೆ ಡಯಾಬಿಟಿಸ್, ರಕ್ತ ಸಂಚಾರ ಸರಿಯಾಗಿ ಇದೆಯೇ ಎಂದು ತಿಳಿಯಲು ಡೋಪಲ್ ಸ್ಕ್ಯಾನ್ ಕೂಡ ಮಾಡಿಸಿದ್ದರು. ಇದಾವ ತೊಂದರೆಯೂ ಚೈತ್ರಾಳಿಗೆ ಇರಲಿಲ್ಲ. ಹಾಗೆ ಗಾಯದ ಕೀವನ್ನು ತೆಗೆದು ಕಲ್ಚರ್ ಮತ್ತು ಸೆನ್ಸಿಟಿವ್ ಟೆಸ್ಟ್ ಮಾಡಿಸಿದ್ದರು. ಈ ಟೆಸ್ಟ್‌ನಿಂದ ಗಾಯದಲ್ಲಿ ಯಾವ ಬ್ಯಾಕ್ಟೀರಿಯ ಸೇರಿಕೊಂಡಿದೆ, ಮತ್ತೆ ಯಾವ ಆಂಟಿಬಯೋಟಿಕ್ ಅದಕ್ಕೆ ನೀಡಬೇಕೆಂಬುದು ತಿಳಿಯುವುದು. ಈ ಟೆಸ್ಟ್ ಮಾಡಿಸಿದ ಡಾಕ್ಟರು ಸರಿಯಾದ ಔಷಧಿಯನ್ನೇ ಬರೆದು ಕೊಟ್ಟಿದ್ದರು. ಆದರೆ ಡಾಕ್ಟರನ್ನೇ ಬದಲಾಯಿಸುವ ಬುದ್ಧಿಯುಳ್ಳ ಬಾಬುವಿಗೆ, ಆ ಔಷಧಿಯ ಪರಿಣಾಮವನ್ನು ನೋಡುವ ತಾಳ್ಮೆ ಎಲ್ಲಿ?!

ನಾನು ಈ ಮೊದಲಿನ ವೈದ್ಯರು ಸೂಚಿಸಿದ ಕ್ಲೋರೋಫೆನಿಕಾಲ್ (chloromphenicol) ಮಾತ್ರೆಗಳನ್ನು 10 ದಿನಗಳ ಕಾಲ ತೆಗೆದುಕೊಳ್ಳಲು ಹೇಳಿದೆ. ವಾರದನಂತರ ತಪಾಸಣೆಗೆ ಬರುವಂತೆ ಸೂಚಿಸಿದೆ. ಈ ಬಾರಿ ಸರಿಯಾಗಿ ಒಂದು ವಾರಕ್ಕೆ ಬಾಬು ಮಗಳನ್ನು ಕ್ಲಿನಿಕ್ಕಿಗೆ ಕರೆತಂದಿದ್ದ. ನಾನು ಚೈತ್ರಳ ಕಾಲಿನ ಗಾಯವನ್ನು ಚೆನ್ನಾಗಿ ಪರೀಕ್ಷಿಸಿದೆ. ಆದರೆ ಈ ಬಾರಿ ಗಾಯದ ಅಂಚಿನಲ್ಲಿ ಸಣ್ಣ ಸಣ್ಣ ಕೀವು ಗುಳ್ಳೆಗಳಾಗಿದ್ದವು. ಈ ಗುಳ್ಳೆಗಳಲ್ಲಿ ಒಂದನ್ನು ನಿಧಾನವಾಗಿ ಕತ್ತರಿಸಿ, ಪರೀಕ್ಷಿಸಿದೆ. ಅದು ವಾಸನೆ ರಹಿತವಾದ ಬಿಳಿಯ ಕೀವಾಗಿತ್ತು. ಈ ಹಿಂದೆ ಟಿ ಬಿ ಕಾಯಿಲೆ ಬಂದವರನ್ನು ಪರೀಕ್ಷಿಸಿದ ಅನುಭವ ಜಾಗ್ರತವಾಯಿತು. ಗಾಯಕ್ಕೆ ಟಿ ಬಿ ಬ್ಯಾಕ್ಟೀರಿಯಾ ಸೇರಿ, ಚರ್ಮದಲ್ಲಿ ಅಲ್ಸರ್ ಉಂಟು ಮಾಡಿರಬಹುದು ಎಂದು ಅನಿಸಿತು. ಬಾಬುವಿಗೆ ಗಾಯದ ಈ ಭಾಗವನ್ನು ತೆಗೆದು ಬಯಾಪ್ಸಿ ಮಾಡುವ ಅನಿವಾರ್ಯತೆಯನ್ನು ತಿಳಿಸಿದೆ. ಆತನು ಸುತ್ತಿ ಸುತ್ತಿ ಸುಸ್ತಾಗಿದ್ದ ನನ್ನ ಮಾತಿಗೆ ಒಪ್ಪಿಕೊಂಡ.

ಮರುದಿನ ಚೈತ್ರಾಳಿಗೆ ಚಿಕ್ಕ ಅರಿವಳಿಕೆಯನ್ನು ನೀಡಿ, ಗಾಯವನ್ನು ಕತ್ತರಿಸಿ ಲ್ಯಾಬೋರೇಟರಿಗೆ ಕಳುಹಿಸಿದೆ. ಎರಡು ದಿನಗಳಲ್ಲಿ ರಿಪೋರ್ಟ್ ಬಂತು. ನನ್ನ ಊಹೆ ಸರಿಯಾಗಿತ್ತು. ಚೈತ್ರಾಳ ಕಾಲಿನ ಗಾಯಕ್ಕೆ ಟಿ ಬಿ ಬ್ಯಾಕ್ಟೀರಿಯಾ ತಾಗಿ ಹುಣ್ಣಾಗಿತ್ತು. ಬಯೋಪ್ಸಿಯ ರಿಪೋರ್ಟಿನ ಕೊನೆಯಲ್ಲಿ ಚರ್ಮದ ಟಿ ಬಿ ಹುಣ್ಣು ಎಂದು ದೃಢಪಡಿಸಿದ್ದರು. ಮುಂದಿನ ಚಿಕಿತ್ಸೆ ಸುಲಭವಾಯಿತು ಎಂದು ನಿರಾಳನಾದೆನಾದರೂ, ಇದನ್ನು ಬಾಬುವಿಗೆ ತಿಳಿಸಿ ಹೇಳುವ ಭಾರವೊಂದು ನನ್ನ ಮೇಲೆ ಕುಳಿತಿತು. ಸಹಜವಾಗಿಯೇ ಇದು ಟಿ ಬಿ ಎಂದಾಗ' ಕೆಮ್ಮು ಜ್ವರ ಯಾವುದು ಇಲ್ಲ! ರಿಪೋರ್ಟೆ ತಪ್ಪಾಗಿರಬಹುದೇ?! ಎಂದು ಬಾಬು ಗಲಿಬಿಲಿಯಿಂದಲೇ ಕೇಳಿದ.

ಜನಸಾಮಾನ್ಯರಲ್ಲಿ ಟಿ ಬಿ ಎಂದರೆ ಶ್ವಾಸಕೋಶಕ್ಕೆ ಮಾತ್ರ ಬರುವ ಕಾಯಿಲೆ ಎಂಬ ತಿಳುವಳಿಕೆ ಇದೆ. ಆದರೆ ದೇಹದಲ್ಲಿ ಸುಪ್ತವಾಗಿದ್ದ ಟಿ ಬಿ ಯಾವ ರೂಪದಿಂದಲಾದರೂ ಕಾಣಿಸಿಕೊಳ್ಳುತ್ತದೆ. ಕರುಳು, ಬೆನ್ನೆಲುಬು, ಮೆದುಳು, ಮೂಳೆ, ಗರ್ಭಕೋಶ ಅಷ್ಟೇ ಅಲ್ಲದೆ ಲಿವರಿಗೂ ಬರಬಹುದು. ಶ್ವಾಸಕೋಶಕ್ಕೆ ಬಂದಾಗ ಟಿ.ಬಿ.ಯನ್ನು ಗುರುತಿಸುವುದು ಸುಲಭ. ಇತರ ಅಂಗಗಳಿಗೆ ಬಂದಾಗ ಇದನ್ನು ಗುರುತಿಸುವುದು ತುಂಬಾ ಕಷ್ಟದ ಕೆಲಸ. ಈಗ ನಿನ್ನ ಮಗಳಿಗೆ ಇದೇ ರೀತಿ ಚರ್ಮದ ಟಿ.ಬಿ. ಆಗಿದೆ ಎನ್ನುವುದನ್ನು ಬಾಬುವಿಗೆ ಮನದಟ್ಟು ಮಾಡಿದೆ.

ಚೈತ್ರಳಿಗೆ ಇನ್ನು ಆರು ತಿಂಗಳು ಟಿ.ಬಿ. ಚಿಕಿತ್ಸೆ ನಡೆಯಬೇಕಿತ್ತು. ಈ ಚಿಕಿತ್ಸೆ ಸರ್ಕಾರಿ ಆಸ್ಪತ್ರೆಯಲ್ಲಿ ಉಚಿತವಾಗಿ ದೊರೆಯುತ್ತದೆ. ಅದಕ್ಕಾಗಿ ಸರ್ಕಾರಿ ಆಸ್ಪತ್ರೆಯ ವೈದ್ಯರಿಗೆ ರೆಫರೆನ್ಸ್ ಲೆಟರ್ ಕೊಟ್ಟು, ಅವತ್ತಿನಿಂದಲೇ ಟ್ರೀಟ್ಮೆಂಟ್ ಪ್ರಾರಂಭಿಸುವಂತೆ ಹೇಳಿದೆ. ಇದಾಗಿ ಎರಡು ತಿಂಗಳ ನಂತರ ಬಾಬು ಕ್ಲಿನಿಕ್ಕಿಗೆ

ಮಗಳನ್ನು ಕರೆತಂದಿದ್ದ. ಆಗಲೇ ಗಾಯವೆಲ್ಲ ವಾಸಿಯಾಗಿತ್ತು. ಆದರೆ ತಪ್ಪದೇ ಆರು ತಿಂಗಳವರೆಗೂ ಮಾತ್ರೆಯನ್ನು ಮುಂದುವರಿಸುವಂತೆ ತಾಕಿತು ಮಾಡಿದೆ. ಹೀಗೆ ಆರು ತಿಂಗಳಲ್ಲಿ ಸಂಪೂರ್ಣ ಗುಣಮುಖಳಾದ ಚೈತ್ರಾ, ಚೈತ್ರ ಮಾಸದಂತೆ ತುಂಬಿ ನಿಂತಳು.

ವೈದ್ಯರ ಮೇಲೆ ಶ್ರದ್ಧೆಯೂ ಇಲ್ಲದೆ, ಔಷಧಿಯ ಪರಿಣಾಮವನ್ನು ನೋಡದೆ ಒಂದು ವರ್ಷಗಳ ಕಾಲವನ್ನು ವ್ಯಯಿಸಿದ ಬಾಬುವಿನಿಂದ, ಮಗಳು ತುಂಬಾ ಹಿಂಸೆಯನ್ನು ಅನುಭವಿಸಿದ್ದಳು. ಆದರೆ ನನ್ನಿಂದಲೇ ಈ ಕಾಯಿಲೆ ಗುಣವಾಗುವ ಯೋಗ ಚೈತ್ರಾಳಿಗೆ ಇತ್ತೇನೊ! ನನಗಂತೂ ಅಪರೂಪದ ಟಿ ಬಿ ಕಾಯಿಲೆಯೊಂದನ್ನು ಗುರುತಿಸಿ, ಗುಣಪಡಿಸಿದ ಸಮಾಧಾನ, ಸಂತೋಷ ಇದೆ.

ಇದಕ್ಕೆ ಸಂವಾದಿಯಾಗಿ ಸೆಲ್ವಂ ಎಂಬ ಒಬ್ಬನ ರೋಗದ ಕಥೆಯು ಇದೆ. ಸೆಲ್ವಂ ಒಂದು ಫ್ಯಾಕ್ಟರಿಯಲ್ಲಿ ಕೆಲಸ ಮಾಡುತ್ತಿದ್ದ ಒಂದು ದಿನ ಆತ ಮೊಣಕೈಯಿಂದ ಮೇಲೆ ತೋಳಿನಲ್ಲಿ 2 ಇಂಚು ಉದ್ದ ಹಾಗೂ ಅರ್ಧ ಇಂಚು ಆಳದ ಗಾಯ ಮಾಡಿಕೊಂಡು ಕ್ಲಿನಿಕ್ಕಿಗೆ ಬಂದಿದ್ದ ನಾನು ಗಾಯಕ್ಕೆ ಹೊಲಿಗೆ ಹಾಕಿ ಔಷಧಗಳನ್ನು ಕೊಟ್ಟು ಕಳುಹಿಸಿದೆ. ಸುಮಾರು 10 ದಿನಗಳಲ್ಲಿಯೇ ಗಾಯ ಸಂಪೂರ್ಣವಾಗಿ ವಾಸಿಯಾಗಿ ಸೆಲ್ವಂ ಕೂಡ ತನ್ನ ಕೆಲಸಗಳಲ್ಲಿ ಮುಂದುವರಿದ

ಇದಾಗಿ ಸುಮಾರು ಎರಡು ತಿಂಗಳ ನಂತರ ಸೆಲ್ವಂ ಕೈಗೆ ಗಾಯವಾಗಿದ್ದ ಭಾಗವನ್ನು ಪರೀಕ್ಷಿಸಿಕೊಳ್ಳಲು ಮತ್ತೆ ಬಂದ ಹಿಂದೆ ಹೊಲಿಗೆ ಹಾಕಿದ ಜಾಗದಲ್ಲಿ ಚರ್ಮ ಸ್ವಲ್ಪ ದಪ್ಪವಾಗಿ ಮೇಲೆ ಸಣ್ಣ ಸಣ್ಣ ಗುಳ್ಳೆಗಳಾಗಿದ್ದವು ಈ ಗುಳ್ಳೆಗಳು ನನಗೆ ಸ್ವಲ್ಪ ವಿಶೇಷವಾಗಿಯೇ ತೋರಿತು. ಇದಕ್ಕೆ ಬೈಯಾಪ್ಸಿ ಮಾಡಿಸುವುದೇ ಉತ್ತವವೆಂದು ಆತನಿಗೆ ಹೇಳಿದೆ

ಬಯಾಪ್ಸಿ ರಿಪೋರ್ಟ್ ಬಂದಾಗ ನನಗೂ ಆಶ್ಚರ್ಯ ಕಾದಿತ್ತು. ಇದು ಇನ್ನೊಂದು ಬಗೆಯ ಚರ್ಮದ ಟಿ.ಬಿ. ಕಾಯಿಲೆಯಾಗಿತ್ತು. ಫ್ಯಾಕ್ಟರಿಯಲ್ಲಿ ಕೆಲಸ ಮಾಡುವ ಸೆಲ್ವನಿಗಾದ ಗಾಯಕ್ಕೆ ಟಿ.ಬಿ. ಬ್ಯಾಕ್ಟೀರಿಯಾ ಹೇಗೆ ತಟ್ಟಿರಬಹುದು ಎಂಬ ಕುತೂಹಲ ನನ್ನಲ್ಲಿತ್ತು. ಆಗ ಸೆಲ್ವನ ಹೆಂಡತಿ, ಅವರ ಪಕ್ಕದ ಮನೆಯಲ್ಲಿ ಒಬ್ಬರು ಟಿ. ಬಿ. ರೋಗಿಯಿರುವ ವಿಚಾರವನ್ನು ತಿಳಿಸಿದಳು. ಬಹುಶಃ ಸೆಲ್ವನ ಗಾಯಕ್ಕೆ ಹೀಗೆ ನೇರವಾಗಿ ಟಿ.ಬಿ. ಬ್ಯಾಕ್ಟೀರಿಯಾ ಸಂಪರ್ಕವಾಗಿದೆ ಎಂದು ಊಹಿಸಿಕೊಂಡೆ. ಸೆಲ್ವಂ ಆರು ತಿಂಗಳ ಚಿಕಿತ್ಸೆ ಪಡೆದು ಗುಣಮುಖನಾದ.

# ವೈದ್ಯರನ್ನು ಪರೀಕ್ಷಿಸಿದ ಮಾತ್ರೆಯ ತುಣುಕು

ಬೆಂಗಳೂರಿನಲ್ಲಿ ನಾನು ಕ್ಲಿನಿಕ್ಕನ್ನು ತೆರೆದು ಸುಮಾರು ಮೂರ್ನಾಲ್ಕು ವರ್ಷಗಳಾಗಿತ್ತು. ಹಾಗಾಗಿ ನನ್ನ ಖಾಯಂ ರೋಗಿಗಳ ಪಟ್ಟಿಯು ಸುಮಾರಾಗಿ ಬೆಳೆದಿತ್ತು. ಅದರಲ್ಲಿ ಶಿವಾನಂದ ಎನ್ನುವ ವ್ಯಕ್ತಿಯೊಬ್ಬರು, ಎರಡು ವರ್ಷಗಳಿಂದ ನನ್ನ ಕ್ಲಿನಿಕ್ಕಿಗೆ ನಿಯತವಾಗಿ ಬರುತ್ತಿದ್ದರು. ವಯಸ್ಸು ಸುಮಾರು 50 ರಿಂದ 55 ಆಗಿರಬಹುದು. ಇವರು ಪೆಟ್ರೋಲ್ ಟ್ಯಾಂಕರ್ ಡ್ರೈವಿಂಗ್ ಕೆಲಸವನ್ನು ಮಾಡುತ್ತಿದ್ದರು. ಈ ಕೆಲಸವಾದರೂ ಪಾಳಿಯ ಮೇಲೆ ನಡೆಸಬೇಕಿತ್ತು, ಅದರಿಂದ ಊಟ ನಿದ್ದೆ ವ್ಯತ್ಯಾಸವಾಗಿಯೊ ಅಥವಾ ಪರಂಪರೆಯಿಂದಲೊ ಬಿಪಿ, ಶುಗರ್ ಕಾಯಿಲೆಗಳು ಇವರನ್ನು ಅಂಟಿಕೊಂಡಿತ್ತು. ಈ ಕಾಯಿಲೆಗಳಿದ್ದವರು ನಿಯತವಾಗಿ ಮೂರು ನಾಲ್ಕು ತಿಂಗಳಿಗೆ ಒಮ್ಮೆಯಾದರೂ ತಪಾಸಣೆಯನ್ನು ಮಾಡಿಸಿಕೊಳ್ಳಬೇಕು. ನನ್ನ ಕ್ಲಿನಿಕ್ಕಿನಿಂದ ಸುಮಾರು ಅರ್ಧ ಕಿಲೋಮೀಟರ್ ದೂರದಲ್ಲಿ ವಾಸವಿರುವ ಶಿವಾನಂದರು ಹೀಗೆ ತಪಾಸಣೆಗಾಗಿ ಬರುವ ರೋಗಿಗಳಲ್ಲಿ ಒಬ್ಬರಾಗಿದ್ದರು. ಮುಂದೆ ಬೆಂಗಳೂರಿನ ನೀರಿನ ಅವ್ಯವಸ್ಥೆಯ ಕಾರಣದಿಂದ ಯಶವಂತಪುರಕ್ಕೆ ಮನೆಯನ್ನು ಬದಲಾಯಿಸಿದರು. ಹಾಗಾಗಿ ಶಿವಾನಂದರು ಕ್ಲಿನಿಕ್ಕಿಗೆ ಬರುವುದು ಬಹುತೇಕ ನಿಂತು ಹೋಗಿತ್ತು.

ಸುಮಾರು ಆರು ತಿಂಗಳ ನಂತರ, ಒಂದು ದಿನ ನನ್ನ ಕ್ಲಿನಿಕ್ಕಿನಲ್ಲಿ ಶಿವಾನಂದರನ್ನು ಕಂಡೆ. ಯಶವಂತಪುರದಿಂದ ಮಾಗಡಿ ರೋಡಿನವರೆಗೆ ತಪಾಸಣೆಗಾಗಿ ಬರಬೇಕಿತ್ತೇ?! ಎಂದುಕೊಂಡೆ. ಏನು ಶಿವಾನಂದರೇ! ಬಿಪಿ, ಶುಗರ್, ಹೇಗಿದೆ? ಎಂದು ವಿಚಾರಿಸಿದೆ. ಶಿವಾನಂದರು 'ಡಾಕ್ಟ್ರೇ! ಅವೆಲ್ಲ ಕಂಟ್ರೋಲ್‌ನಲ್ಲಿದೆ'ಯೆಂದು 15 ದಿನಗಳ ಹಿಂದೆ ಪರೀಕ್ಷಿಸಿದ ರಿಪೋರ್ಟನ್ನು ತೋರಿಸಿದರು. ಆದರೂ ಅವರ ಇಚ್ಛೆಯ ಮೇರೆಗೆ ಬಿಪಿ ಚೆಕ್ ಮಾಡಿದೆ. ಸರಿಯಾಗಿ ಇತ್ತು.

ನಂತರ ಶಿವಾನಂದರು ಬಂದ ಕಾರಣವನ್ನು ವಿವರಿಸಿದರು. ಸುಮಾರು ಹದಿನೈದು ದಿನಗಳಿಂದ ಆಗಾಗ ಕೆಮ್ಮು ಬರುತ್ತಿತ್ತು. ಯಶವಂತಪುರದ ಕ್ಲಿನಿಕ್ಕನೆಲ್ಲ ಹೊಕ್ಕುಬಂದಿದ್ದರು. ಅಲ್ಲಿ ಹೇಳಿದ ಮಾತ್ರೆ, ಸಿರಪ್ ಎಲ್ಲವನ್ನು ಸೇವಿಸಿದ್ದರು. ಆದರೆ ಪರಿಣಾಮ ಮಾತ್ರ ಶೂನ್ಯವಾಗಿತ್ತು. ಅದರಿಂದ ಅಲ್ಲಿನ ಡಾಕ್ಟ್ರಗಳು, ಇದಕ್ಕೊಂದು ಎಕ್ಸರೆಯನ್ನು ತೆಗೆದು ನೋಡಬೇಕು ಎಂಬ ಸಲಹೆಯನ್ನು ಕೊಟ್ಟರು. ಇನ್ನು ಶಿವಾನಂದರಿಗೆ ಈಗಾಗಲೇ ಬಿಪಿಗೋ

ಶುಗರಗೋ ತೆಗೆದುಕೊಳ್ಳುವ ಮಾತ್ರೆಯ ಅಡ್ಡ ಪರಿಣಾಮ ಇರಬಹುದೆ? ಎಂಬ ಸಂಶಯವು ಕಾಡಿತ್ತು. ಇವುಗಳ ಪರಿಹಾರಕ್ಕಾಗಿ ಮೊದಲಿನಿಂದಲೂ ಶಿವಾನಂದರ ತಪಾಸಣೆಯನ್ನು ಮಾಡುತ್ತಿರುವ ನನ್ನಲ್ಲಿಗೆ ಬಂದಿದ್ದರು.

ಅವರು ಕೆಮ್ಮಿಗಾಗಿ ಈ ಮೊದಲು ತೆಗೆದುಕೊಂಡ ಮಾತ್ರೆಗಳ ಚೀಟಿಯನ್ನು ತೆಗೆದು ನೋಡಿದೆ. ಸಾಮಾನ್ಯವಾಗಿ ಶ್ವಾಸಕೋಶದ ಇನ್ಫೆಕ್ಷನ್ ಆಗಿರಬಹುದು ಎಂದು, ಅದಕ್ಕೆ ಸಂಬಂಧಿಸಿದ ಆಂಟಿಬಯೋಟಿಕ್ ಮಾತ್ರೆ ಹಾಗೂ ಕೆಮ್ಮಿನ ಸಿರಪುಗಳನ್ನು ಬರೆದುಕೊಟ್ಟಿದ್ದರು. ಹಾಗಾಗಿ ನಾನು ಇದಕ್ಕೂ ಮುಂದಿನ ಚಿಕಿತ್ಸೆಯನ್ನು ಯೋಚಿಸಬೇಕಿತ್ತು. ಶಿವಾನಂದರಿಗೆ ಶುಗರ್ ಇರುವುದರಿಂದ ಟಿ ಬಿ ಕಾಯಿಲೆ ತಗುಲಿತೇ? ಎಂಬ ಅನುಮಾನ ನನಗೆ ಮೂಡಿತು. ಒಮ್ಮೆ ಪರೀಕ್ಷಿಸಿಯೇ ಬಿಡೋಣ ಎಂಬ ನಿರ್ಧಾರದಿಂದ, ಒಂದು ಎದೆಯ ಎಕ್ಸರೇ ಹಾಗೆ ಕಫ ಮತ್ತು ರಕ್ತ ಪರೀಕ್ಷೆಗಾಗಿ ಬರೆದು ಕೊಟ್ಟೆ.

ಈ ಎಲ್ಲಾ ಪರೀಕ್ಷೆಗಳ ಫಲಿತಾಂಶದೊಂದಿಗೆ ಮೂರನೇ ದಿನವೇ ಶಿವಾನಂದರು ನನ್ನ ಕ್ಲಿನಿಕ್ಕಿಗೆ ಬಂದರು. ಎಲ್ಲವೂ ಸರಿಯಾಗಿತ್ತು! ಹಾಗಾದರೆ ಕೆಮ್ಮಿನ ಮೂಲವೇನು?!! ಎಂಬ ಚಿಂತೆ ನನ್ನನ್ನು ಕಾಡತೊಡಗಿತು. ಬಿ.ಪಿ.ಗೆ ನೀಡುವ ಕೆಲವು ಮಾತ್ರೆಗಳು ಕಾಲಾನಂತರದಲ್ಲಿ ಕೆಮ್ಮನ್ನುಂಟು ಮಾಡುವ ಸಾಧ್ಯತೆ ಇರುತ್ತದೆ. ಆದರೆ ಶಿವಾನಂದರಿಗೆ ನೀಡಿದ ಮಾತ್ರೆ, ಕೇವಲ ಮೂತ್ರ ವಿಸರ್ಜನೆಯಾಗಿ ಬಿಪಿ ನಿಯಂತ್ರಣ ಮಾಡುವ ಮಾತ್ರೆಗಳನ್ನು ತೆಗೆದುಕೊಳ್ಳುವಂತೆ ಸಲಹೆಯನ್ನು ನೀಡಲಾಗಿತ್ತು. ಹಾಗಾಗಿ ಈ ಮಾತ್ರೆಯಿಂದಲೂ ಶಿವಾನಂದರಿಗೆ ಕೆಮ್ಮು ಉಂಟಾಗುವ ಸಾಧ್ಯತೆಯಿರಲಿಲ್ಲ. ಇನ್ನು ಗಂಟಲಿನಲ್ಲಿ ಏನಾದರೂ ತೊಂದರೆ ಇದ್ದು, ಕೆಮ್ಮು ನಿರಂತರವಾಗಿರಬಹುದು ಎಂದೆನಿಸಿತು.

ಶಿವಾನಂದರು ನನ್ನ ಸೂಚನೆಯೊಂದಿಗೆ ರೆಫರೆನ್ಸ್ ಲೆಟರ್ ಸಹಿತವಾಗಿ, ನನ್ನ ಸ್ನೇಹಿತ ENT ಡಾಕ್ಟರ್‌ರಿಗೆ ತೋರಿಸಿಕೊಂಡು ಬಂದರು. ಗಂಟಲಿನಲ್ಲೂ ಏನೂ ತೊಂದರೆ ಇಲ್ಲ! ಎಂದು, ಐದು ದಿನಕ್ಕೆ ಸಿರಪ್ ಮತ್ತು ಪ್ರಬಲವಾದ ಆಂಟಿಬಯೋಟಿಕ್ ಬರೆದು ಕೊಟ್ಟಿದ್ದರು. ಗಂಟಲಿನಲ್ಲೂ ತೊಂದರೆ ಇಲ್ಲ ಎಂದಮೇಲೆ ಕೆಮ್ಮಿನ ಮೂಲ ಬಹಳ ನಿಗೂಢವೆನಿಸಿತು.

'ಈಗ ಈ ಔಷಧಿಗಳನ್ನು ತೆಗೆದುಕೊಳ್ಳಿ. ಇದರಿಂದಲೂ ಕಡಿಮೆಯಾಗದಿದ್ದರೆ ಎದೆಯ ಸಿಟಿ ಸ್ಕ್ಯಾನ್ ಮಾಡಬೇಕಾಗುತ್ತದೆ' ಎಂದು ಸೂಚನೆಯನ್ನು ಕೊಟ್ಟೆ. ಆ ಸಮಯದಲ್ಲಿ ಸಿಟಿ ಸ್ಕ್ಯಾನ್ ಬೆಂಗಳೂರಿನಲ್ಲೂ ತುಂಬಾ ದುರ್ಲಭವಾಗಿತ್ತು. ಬೆಲೆಯು ತುಂಬಾ ದುಬಾರಿಯಾಗಿತ್ತು.

ಇದಾಗಿ ಸುಮಾರು 15 – 20 ದಿನಗಳ ಕಾಲ ಶಿವಾನಂದರು ಕಾಣಲಿಲ್ಲ. ಹಾಗಾಗಿ ENT ವೈದ್ಯರ ಔಷಧದಿಂದ ಶಿವಾನಂದರಿಗೆ ಕೆಮ್ಮು ಕಡಿಮೆಯಾಗಿದೆ ಎಂದುಕೊಂಡೆ.

ಆಮೇಲೆ ಒಂದು ಸಂಜೆ ಶಿವಾನಂದರು ಕ್ಲಿನಿಕ್ಕಿಗೆ ಬಂದರು. ಅವರನ್ನು ನೋಡಿದಾಗ ಕೆಮ್ಮು ಕಡಿಮೆಯಾದಂತೆ ಅನಿಸಿತು. 'ENT ವೈದ್ಯರ ಔಷದ ಪರಿಣಾಮ ಬಿದ್ದಂತೆ ಕಾಣಿಸುತ್ತಿತ್ತು. ಈಗ ಕೆಮ್ಮು ಇಲ್ಲ ಅಲ್ಲವೇ?' ಎಂದು ಕೇಳಿದೆ. 'ಸ್ವಾಮಿ! ಯಾವ ಔಷಧವು ಕೆಲಸ ಮಾಡುತ್ತಿಲ್ಲ. ಸಿಟಿ ಸ್ಕ್ಯಾನಿಗಾಗಿ ಹಣ ಹೊಂದಿಸಲು ಪ್ರಯತ್ನಿಸುತ್ತಿದ್ದೆ. ಹಾಗಾಗಿ ಇಲ್ಲಿಗೆ ಬರಲು ತಡವಾಯಿತು' ಎಂದರು ನನಗೂ ವಿಷಾದವಾಯಿತು. ಸ್ವಲ್ಪ ಯೋಚಿಸುತ್ತಾ ಕುಳಿತೆ.

ಶಿವಾನಂದರು ನಿಧಾನವಾಗಿ ಜೋಬಿನಿಂದ ಪೊಟ್ಟಣವೊಂದನ್ನು ತೆಗೆದರು. ಅದನ್ನು ಬಿಡಿಸಿ ನನ್ನತ್ತ ಹಿಡಿದರು. ನನಗೂ ಶಿವಾನಂದರು ಏನು ಮಾಡುತ್ತಿದ್ದಾರೆ! ಏನು ತೋರಿಸುತ್ತಿದ್ದಾರೆ! ಎಂದು ತಿಳಿಯಲಿಲ್ಲ. ಕುತೂಹಲದಿಂದ ನಿರೀಕ್ಷಿಸುತ್ತಿದ್ದೆ. ಆಗ ಶಿವಾನಂದರು, "ನೋಡಿ ಡಾಕ್ಟ್ರೇ! ನೆನ್ನೆ ಒಂದು ಹೋಟೆಲ್ನಲ್ಲಿ ಕಾಫಿಯನ್ನು ಕುಡಿಯುತ್ತಾ ಇದ್ದೆ. ಜೋರಾಗಿ ಕೆಮ್ಮು ಕಾಣಿಸಿಕೊಂಡಿತು. ಹಾಗೆ ಕೆಮ್ಮುವಾಗ ಇದೊಂದು ಚಿಕ್ಕ ಪೀಸ್ ಹೊರಗೆ ಬಂತು. ಯಾವುದಕ್ಕೂ ತಮಗೆ ತೋರಿಸಿ ಅಭಿಪ್ರಾಯವನ್ನು ಪಡೆಯಲು, ಇದನ್ನು ರಕ್ಷಣೆ ಮಾಡಿಕೊಂಡು ತಂದಿದ್ದೇನೆ" ಎಂದರು.

ಸೂಕ್ಷ್ಮವಾಗಿ ಅವರು ತಂದ ಪೊಟ್ಟಣದಲ್ಲಿರುವ "ಪೀಸ್"ಅನ್ನು ಪರೀಕ್ಷಿಸಿದೆ. ಅದು ಕ್ಯಾಪ್ಸೂಲಿನ ಹೊರಮೈ ಕವಚದ ಪ್ಲಾಸ್ಟಿಕ್ ತುಣಕಾಗಿತ್ತು. ಗಂಟಲಲ್ಲೇಲ್ಲೊ ಕುಳಿತ ಈ ಪ್ಲಾಸ್ಟಿಕ್ ತುಣುಕೆ ಅವರ ಕೆಮ್ಮಿಗೆ ಕಾರಣವಾಗಿತ್ತು. ನಾನು, 'ಈಗ ಕೆಮ್ಮು ಹೇಗಿದೆ?' ಎಂದು ಶಿವಾನಂದರನ್ನು ಕೇಳಿದೆ. ಅವರು ಆಶ್ಚರ್ಯದಿಂದ ಕಣ್ಣನ್ನು ಅರಳಿಸಿಕೊಂಡು, 'ನಿನ್ನೆ ಸಂಜೆಯಿಂದ ಈ ಕೆಮ್ಮು ಕಾಣಲೇ ಇಲ್ಲ!!' ಎಂದರು. ಅಲ್ಲಿಗೆ ನನ್ನ ಊಹೆಯಂತೆ, ಕಾರ್ಯಕಾರಣದ ಹೊಂದಿಕೆಯು ಆಯಿತು.

ಮುಂದುವರಿದ ಶಿವಾನಂದರು ಈ ಪ್ಲಾಸ್ಟಿಕ್ ತುಣುಕಿನ ಇತಿಹಾಸವನ್ನು ಹೇಳಿದರು. ಮೈ ಕೈ ನೋವಿಗೆಂದು ಮೆಡಿಕಲ್ ಸ್ಟೋರಿಗೆ ಹೋಗಿ ಮಾತ್ರೆಯನ್ನು ವಿಚಾರಿಸಿದರು, ಅಲ್ಲಿ ಕೊಟ್ಟ ಕ್ಯಾಪ್ಸುಲ್ ಸ್ವಲ್ಪ ಓಪನ್ ಆಗಿತ್ತು. ಆದರೂ ಶಿವಾನಂದರು ಹಾಗೇ ಆ ಕ್ಯಾಪ್ಸುಲನ್ನು ನುಂಗಿದರು. ನುಂಗಿದ ಸಮಯದಲ್ಲಿ ಗಂಟಲಿನಲ್ಲಿ ಏನೋ ಸಿಕ್ಕಿಕೊಂಡ ಹಾಗೆ ಅನುಭವವೂ ಆಯಿತು. ಆಗ ತೆಗೆದುಕೊಂಡ ಕ್ಯಾಪ್ಸುಲ್ ಬಣ್ಣ ಮತ್ತು ಈಗ ಸಿಕ್ಕ ಪ್ಲಾಸ್ಟಿಕ್ ಚೂರಿನ ಬಣ್ಣವೂ ಒಂದೇ ಆಗಿತ್ತು. 'ಅದೇ ಈ ಕೆಮ್ಮಿಗೆ ಕಾರಣವೆಂಬ ಊಹೆಯು ನನಗೆ ಬರಲಿಲ್ಲ. ಹಾಗಾಗಿ ಈ ವಿಚಾರವನ್ನು ತಮ್ಮಲ್ಲಿ ಪ್ರಸ್ತಾಪಿಸಲೂ ಇಲ್ಲ' ಎಂದರು.

ಶರೀರ ಎಷ್ಟು ಸೂಕ್ಷ್ಮವೆಂದರೆ, ತನಗಾಗದ ಈ ಪ್ಲಾಸ್ಟಿಕ್ ಚೂರನ್ನು ಹೊರಹಾಕಲು ನಿರಂತರ ಕೆಮ್ಮನ್ನು ಉಂಟು ಮಾಡಿತ್ತು. ಆದರೆ ಕಾರಣ ತಿಳಿಯದೆ ಒಂದಾದ ಮೇಲೊಂದರಂತೆ ತಪಾಸಣೆಯನ್ನು ಮಾಡಬೇಕಾಗಿ ಬಂತು. ಇನ್ನೂ ಮುಂದೆ ಹಲವಾರು ತಪಾಸನೆಗಳು ಸರದಿಯಲ್ಲಿ ನಿಂತಿದ್ದವು.

ಅಷ್ಟರಲ್ಲೇ ಹೊರಬಿದ್ದ ಪ್ಲಾಸ್ಟಿಕ್ ತುಣುಕು, ಶಿವಾನಂದರ ಆರೋಗ್ಯವನ್ನು ಹಣವನ್ನು ಉಳಿಸಿತು. ವೈದ್ಯಶಾಸ್ತ್ರ ಎಷ್ಟೇ ಮುಂದುವರಿದರು ಸಣ್ಣದೊಂದು ಮಾತ್ರೆಯ ಪ್ಲಾಸ್ಟಿಕ್ ತುಣುಕು ಎಲ್ಲವನ್ನು, ಎಲ್ಲರನ್ನೂ ಪರೀಕ್ಷಿಸಿ ಬಿಡುತ್ತದಲ್ಲ ಎನಿಸಿತು.

# ಚಾಲಾಕಿ ರೋಗಿಗಳು ಹಾಗೂ ಅವರ ಸಂಬಂಧಿಗಳು.

ಸಾಮಾನ್ಯವಾಗಿ ರೋಗಿಗಳು ಹಾಗೂ ಅವರ ಸಂಬಂಧಿಗಳು ಪ್ರಾಮಾಣಿಕರಾಗಿಯೆ ಇರುತ್ತಾರೆ. ಆದರೆ ಕೆಲವೊಂದು ಮಂದಿ ವೈದ್ಯರ ಶುಲ್ಕ ನೀಡದೆ ಮರಳುಗೊಳಿಸಿ ಯಾಮಾರಿಸಿ, ಹಣ ಪಾವತಿಸದೇ ಹೋಗುವ ರೋಗಿಗಳೂ ಇರುತ್ತಾರೆ. ಇದಕ್ಕೆ ಅನೇಕ ಕಾರಣಗಳಿರಬಹುದು, ಮುಖ್ಯವಾಗಿ ಬಡತನ.  ಇನ್ನು ಹಳ್ಳಿಗಳಲ್ಲಿಯೇ ಈ ಪದ್ಧತಿ ಜಾಸ್ತಿ ಎನ್ನುವುದು ನನ್ನ ಅನುಭವದ ಮಾತು. ಇನ್ನೊಂದು ಕಾರಣ ಅವರು ಪಡೆದುಕೊಂಡ ಸಂಸ್ಕಾರ, ಬೆಳಸಿಕೊಂಡ ಸ್ವಭಾವ. ವ್ಯಕ್ತಿತ್ವ ರೂಪುಗೊಳ್ಳುವಲ್ಲಿ ಬೆಳೆದ ಪರಿಸರ, ವಂಶಪಾರಂಪರ್ಯತೆ ಎಲ್ಲವೂ ಕಾರಣಗಳಾಗುತ್ತವಲ್ಲ? ಇಂತಹ (ಶುಲ್ಕ ಯಾಮಾರಿಸುವ) ಕೆಲವು ಘಟನೆಗಳನ್ನು ಇಲ್ಲಿ ಪ್ರಸ್ತಾಪಿಸಲು ಬಯಸುತ್ತೇನೆ.

ಸುಮಾರು ಮೂವತ್ತು ವರ್ಷಗಳ ಹಿಂದೆ, ನನ್ನ ರೋಗಿಯಾದ ಮುಸ್ಲಿಂ ಮಹಿಳೆಯೊಬ್ಬರು, ತನ್ನ ಮಗಳನ್ನು ಸೌದಿ ಅರೇಬಿಯಾದ ಶ್ರೀಮಂತನಿಗೆ ಮದುವೆ ಮಾಡಿ ಕೊಟ್ಟಿದ್ದರು. ಆಕೆಯ ಮಗಳು, ಇಪ್ಪತ್ಮೂರು - ಇಪ್ಪತ್ನಾಲ್ಕರ ಹುಡುಗಿ. ಅರೇಬಿಯಾದ ಶ್ರೀಮಂತ ವರನ ಪ್ರಾಯ, ಅರವತ್ತು ಅರವತ್ತೆರಡು ಇರಬಹುದು. ಹಣದಾಸೆಗೆ ಹೆತ್ತವರು, ಬ್ರೋಕರ್‌ಗಳ ಸಹಾಯದಿಂದ ತಮ್ಮ ಹೆಣ್ಣು ಮಕ್ಕಳನ್ನು ಸೌದಿ ಅರೇಬಿಯಾದ ಶೇಕ್ ಮುದುಕರಿಗೆ ಲಗ್ನ ಮಾಡಿಕೊಡುವ ಪ್ರಸಂಗಗಳು ಆ ಸಮಯದಲ್ಲಿ ಮುಸ್ಲಿಂ ಸಮುದಾಯದಲ್ಲಿ ಸರ್ವೇಸಾಮಾನ್ಯವಾಗಿತ್ತು.

ಹೀಗಿರುವಾಗ ಒಂದು ಸಾರಿ ಆ ಮುಸಲ್ಮಾನ ಮಹಿಳೆಯ ಸೌದಿ ಅಳಿಯ, ಆತನ ಭಾವನೆಂಟ (ಹೆಂಡತಿಯ ಅಣ್ಣ)ನೊಂದಿಗೆ ನನ್ನ ಕ್ಲಿನಿಕ್‌ಗೆ ಬಂದ. ಭಾವನೆಂಟ, ಇಸ್ಮಾಯಿಲ್,

"ಸರ್, ನನ್ನ ಭಾವನವರಿಗೆ ಬಹಳ ತಿಂಗಳುಗಳಿಂದ ಕಾಲು ನೋವು" ಎಂದು ಉರ್ದುವಿನಲ್ಲಿ ಹೇಳಿದ. ಇಸ್ಮಾಯಿಲ್ ನನ್ನ ಕಾಯಂ ಗಿರಾಕಿ. ಆತ ಜೀವನೋಪಾಯಕ್ಕಾಗಿ ಆಟೋ ಓಡಿಸಿಕೊಂಡಿದ್ದ. ಸರಿ, ಸೌದಿ ಅಳಿಯನನ್ನು ಪರೀಕ್ಷಿಸಿದಾಗ, ಆತನಿಗೆ ವಯೋಸಹಜ ಮೊಣಕಾಲಿಗೆ ಬರುವ ಅರ್ಥರೈಟಿಸ್(osteoarthritis) ಎಂದು ತಿಳಿಯಿತು. ನೋವು ಕಡಿಮೆಯಾಗುವ

ಮಾತ್ರೆ ಬರೆದುಕೊಟ್ಟು, ಸಂಬಂಧಿಸಿದ ಕಾಲಿನ ವ್ಯಾಯಾಮವನ್ನು ತಿಳಿಸಿದೆ. ನನ್ನ ಶುಲ್ಕವನ್ನು (ಆವಾಗ 15/- ರೂ.) ಕೊಟ್ಟು ಇಬ್ಬರೂ ವಾಪಸಾದರು.

ಒಂದು ವಾರದ ನಂತರ, ಇಸ್ಮಾಯಿಲ್, ಪುನಃ ಭಾವನೊಂದಿಗೆ ಕ್ಲಿನಿಕ್ಕಿಗೆ ಬಂದಿದ್ದ. ಸೌದಿಯ ಶ್ರೀಮಂತ, ಬಹಳ ಸಂತೋಷಚಿತ್ತನಾಗಿದ್ದ. ತನ್ನ ಭಾಷೆಯಲ್ಲಿ,

"ಸಾರ್, ನಿಮ್ಮ ಚಿಕಿತ್ಸೆಯಿಂದ ನನ್ನ ಕಾಲು ನೋವು ಬಹಳ ಕಡಿಮೆಯಾಗಿದೆ. ಇನ್ನೂ ಎಷ್ಟು ಸಮಯ ಮಾತ್ರೆ ಮುಂದುವರೆಸಲಿ?' ಎಂದು ಕೇಳಿದ.

'ಇನ್ನೊಂದು ತಿಂಗಳು, ಮುಂದುವರೆಸುವಂತೆ ಹಾಗೂ ವ್ಯಾಯಾಮ ಮಾಡುತ್ತಿರುವಂತೆ' ಸೂಚಿಸಿದೆ. ಶೇಕ್‌ನಿಗೆ ನನ್ನ ಚಿಕಿತ್ಸೆಯಿಂದ ಬಹಳ ಸಂತೋಷವಾಗಿತ್ತು. ಹಾಗೂ ಅದಕ್ಕೆ ಪ್ರತಿಯಾಗಿ ತಾನು ನೀಡುವ ಶುಲ್ಕ ತುಂಬಾ ಕಡಿಮೆ ಅನ್ನಿಸಿರಬೇಕು. ಈ ಬಾರಿ ಆತ, ರೂ.50ರ ನೋಟನ್ನು ನೀಡಿ, ಚಿಲ್ಲರೆ ಪಾವತಿಸಲು ಹೋದಾಗ ನಿರಾಕರಿಸಿ, ನೀವೇ ಇಟ್ಟುಕೊಳ್ಳಿ ಎಂಬಂತೆ ಸನ್ನೆ ಮೂಲಕ ತಿಳಿಸಿದ. ಇದನ್ನೆಲ್ಲ ಗಮನಿಸುತ್ತಿದ್ದ ಇಸ್ಮಾಯಿಲ್, ಭಾವ ಜಾಸ್ತಿ ಹಣ ನೀಡಿದ್ದು, ಸರಿ ಕಾಣದೆ ಮುಖಚರ್ಯೆಯಲ್ಲಿಯೇ ತನ್ನ ಅಸಮಾಧಾನ ವ್ಯಕ್ತಪಡಿಸಿ ಹೊರಟು ಹೋದ.

ಇದಾಗಿ ಒಂದು ಒಂದು ಗಂಟೆಯ ನಂತರ ಇಸ್ಮಾಯಿಲ್ ಒಬ್ಬನೇ ನನ್ನ ಕ್ಲಿನಿಕ್ಕಿಗೆ ಬಂದು, 'ಡಾಕ್ಟರ್ ಸಾಬ್, ನನ್ನ ಭಾವ ನನ್ನ ಹತ್ತಿರ, ನಿಮ್ಮಿಂದ ಚಿಲ್ಲರೆ ಹಣ ಪಡೆದುಕೊಂಡು ಬರುವಂತೆ ಹೇಳಿ ಕಳುಹಿಸಿದ್ದಾರೆ' ಎಂದ. ಇಂತಹ ಜನರಿಗೆ ಬೇರೆಯವರು ಮನಃಪೂರ್ವಕವಾಗಿ ಜಾಸ್ತಿ ಶುಲ್ಕ ನೀಡಿದರೂ ಸಹಿಸಿಕೊಳ್ಳಲಾಗುವುದಿಲ್ಲ. ಇದು ಈತನದೇ ಮಸಲತ್ತು ಎಂದು ಅರಿತ ನಾನು ಕೂಡ ಉಪಾಯವಾಗಿ, ಅವನದೇ ಧಾಟಿಯಲ್ಲಿ, 'ನಿನ್ನ ಭಾವನನ್ನೇ ಕಳುಹಿಸು ಚಿಲ್ಲರೆ ಕೊಡುತ್ತೇನೆ' ಎಂದೆ. ಕೂಡಲೇ ಸಪ್ಪೆ ಮೊರೆ ಹಾಕಿಕೊಂಡು ವಾಪಸಾದ ಇಸ್ಮಾಯಿಲ್, ಪುನಃ ಕ್ಲಿನಿಕ್ ಕಡೆ ತಲೆ ಹಾಕಲಿಲ್ಲ ಎಂದು ಹೇಳಬೇಕಾಗಿಲ್ಲ ತಾನೆ?

ಇನ್ನೊಂದು ಗೌರಮ್ಮನ ಮಗನ ಕಥೆ. ಇದು ಕೂಡ ಇಪ್ಪತ್ತು ವರ್ಷಗಳ ಹಿಂದಿನ ಕಥೆ. ಗೌರಮ್ಮ ಚಿಕಿತ್ಸೆಗಾಗಿ ನನ್ನಲ್ಲಿಗೆ ಬಂದಿದ್ದಳು. ಅವಳನ್ನು ಪರೀಕ್ಷಿಸಿ,ಮಾತ್ರೆಗಳನ್ನು ಬರೆದು ಕೊಟ್ಟೆ ಹಾಗೆ ರಕ್ತ ಪರೀಕ್ಷೆಗೂ ಬರೆದೆ. ಆಕೆ ಶುಲ್ಕಕ್ಕಾಗಿ 50/- ರೂ ನೋಟು ಕೊಟ್ಟಳು. ಆ ಸಮಯದಲ್ಲಿ ನನ್ನ ಶುಲ್ಕ ರೂ. 20/- ಇದ್ದ ಕಾರಣ, ಚಿಲ್ಲರೆ 30 ರೂಪಾಯಿಯನ್ನು ವಾಪಸ್ ಕೊಟ್ಟು ಕಳುಹಿಸಿದೆ.

ಒಂದು ಗಂಟೆಯ ನಂತರ ಆಕೆಯ ಮಗ ನನ್ನಲ್ಲಿಗೆ ಬಂದು, "ಡಾಕ್ಟ್ರೇ, ನನ್ನ ತಾಯಿ ಈಗ ನಿಮ್ಮಲ್ಲಿಗೆ ಬಂದಿದ್ದರಲ್ಲ?" ಎಂದು ಕೇಳಿದ. ನಾನು ಆಕೆಗೆ

ಬರೆದಿರುವ ಔಷಧವೇನಾದರೂ ಸಿಗಲಿಲ್ಲದಿರಬಹುದೆಂದು ಭಾವಿಸಿ, "ಹೌದು, ಏಕೆ ಮಾತ್ರೆ ಏನಾದರೂ ಮೆಡಿಕಲ್ ಸ್ಟೋರ್‌ನಲ್ಲಿ ಸಿಗಲಿಲ್ಲವೇ?" ಎಂದು ವಿಚಾರಿಸಿದೆ.

"ಹಾಗೇನಿಲ್ಲ ಮಾತ್ರೆಗಳೆಲ್ಲ ಸಿಕ್ಕಿವೆ, ಆದರೆ ಅಮ್ಮ ನಿಮಗೆ ರೂ.50 ಕೊಟ್ಟಿದ್ದರಂತೆ. ನೀವು ಚಿಲ್ಲರೆ ಇಲ್ಲದ ಕಾರಣ ಆಮೇಲೆ ಹಣ ವಾಪಸು ಕೊಡುವುದಾಗಿ ಹೇಳಿದ್ದೀರಂತಲ್ಲ" ಎಂದು ಪೀಠಿಕೆ ಶುರು ಮಾಡಿದ. ಹಣ ಲಪಟಾಯಿಸಲು ಈ ಜನ ಏನೆಲ್ಲಾ ನಾಟಕ ಮಾಡುತ್ತಾರೆ ನೋಡಿ? ಕಿಲಾಡಿಯ ಮುಖ ನೋಡಿ ಕುಡುಕನೆಂಬುದು ಖಾತ್ರಿಯಾಗಿತ್ತು. ನನ್ನನ್ನು ಮರಳುಗೊಳಿಸಿ 30 ರೂಪಾಯಿ ಕಿತ್ತುಕೊಂಡು ಹೋಗುವುದು ಆತನ ಪ್ಲಾನ್ ಆಗಿತ್ತು. ಇದನ್ನರಿತ ನಾನು ಆತನಿಗೂ ಕೂಡ "ನಿನ್ನ ತಾಯಿಯನ್ನೇ ಕಳುಹಿಸು ಚಿಲ್ಲರೆ ಕೊಡುತ್ತೇನೆ" ಎಂದು ಹೇಳಿದಾಗ, ಡಾಕ್ಟರನ್ನು ಯಾಮಾರಿಸುವ ಆತನ ಉಪಾಯ ಫಲಿಸದೆ, ಬಂದ ದಾರಿಗೆ ಸುಂಕವಿಲ್ಲ ಎಂಬಂತೆ ವಾಪಸ್ ಆಗಿದ್ದ.

ಇನ್ನೊಂದು, ನಾನು ಹಳ್ಳಿಯಲ್ಲಿ ಪ್ರಾಕ್ಟೀಸ್ ಮಾಡುತ್ತಿದ್ದಾಗಿನ ಘಟನೆ. ಆವಾಗ ಈಗಿನಂತೆ ನರ್ಸಿಂಗ್ ಹೋಂಗಳಾಗಲಿ, ಆಸ್ಪತ್ರೆಗಳಾಗಲಿ ಅಷ್ಟೇನೂ ಇರಲಿಲ್ಲ. ಹೆಚ್ಚಿನ ಹೆರಿಗೆಗಳು ಮನೆಗಳಲ್ಲಿಯೇ ಸೂಲಗಿತ್ತಿಯರ ಸಮ್ಮುಖದಲ್ಲಿ ಆಗುತ್ತಿದ್ದವು. ಏನಾದರೂ ತೊಂದರೆ ಎದುರಾದಾಗ ಮಾತ್ರ ಡಾಕ್ಟರ್ ಅನ್ನು ಕರೆಸುವ ಪದ್ಧತಿ. ಮಾಮೂಲು ಹೆರಿಗೆ ಆದರೆ ಡಾಕ್ಟರಿಗೆ ಸುಮ್ಮನೆ ಏಕೆ ಶುಲ್ಕ ನೀಡಬೇಕು? ಎನ್ನುವ ಮನೋಭಾವ ಹಳ್ಳಿ ಜನರದ್ದು. ಇಂತಹದೇ ಒಂದು ಸಂದರ್ಭ, ನಾನು ಹಳ್ಳಿಯಲ್ಲಿ ಪ್ರಾಕ್ಟೀಸ್ ಮಾಡುವಾಗ ನಡೆಯಿತು. ಒಂದು ದಿನ ರಾತ್ರಿ ಸರಿಸುಮಾರು 3 ಗಂಟೆ ಇರಬಹುದು, ಹೆರಿಗೆ ಮಾಡಿಸಲು ನನ್ನನ್ನು ಕರೆಯಲು ಬಂದಿದ್ದರು. ಸರಿ, ವಿಸಿಟಿಂಗ್ ಕಿಟ್‌ಗೆ ಅಗತ್ಯದ ಸಲಕರಣೆಗಳನ್ನೆಲ್ಲ ಸೇರಿಸಿಕೊಂಡು ಹೊರಟೆ. ದಾರಿಯಲ್ಲಿ ಒಂದು ಅರ್ಧ ಕಿಲೋಮೀಟರ್ ಕ್ರಮಿಸಿದ ಮೇಲೆ, ಒಂದು ಹಿನ್ನೀರಿನ ಹೊಳೆ ಇತ್ತು. ಆ ಹೊಳೆ ದಾಟಲು ಸೇತುವೆ ಇಲ್ಲದ ಕಾರಣ ನಾನು ಹಾಗೂ ನನ್ನನ್ನು ಕರೆದೊಯ್ಯಲು ಬಂದ ಗರ್ಭಿಣಿಯ ಸಂಬಂಧಿಕರು, ಪ್ಯಾಂಟನ್ನು ತೊಡೆಯವರೆಗೆ ಮಡಚಿ ನೀರಿಗೆ ಇಳಿದೆವು. ಆಗ ದೂರದಿಂದ ಹುಡುಗನೊಬ್ಬ ಓಡೋಡಿ ಬರುತ್ತಾ, " ಮಾಮ, ಡಾಕ್ಟರ್ ಬರುವುದು ಬೇಡವಂತೆ, ಹೆರಿಗೆ ಆಯಿತಂತೆ" ಎಂದು ಕೂಗುತ್ತಿದ್ದ. ಇದನ್ನು ಕೇಳಿಸಿಕೊಂಡ ಕರೆಯಲು ಬಂದ ವ್ಯಕ್ತಿ, "ಸರ್ ಹೆರಿಗೆ ಆಯಿತಂತೆ. ನೀವು ಬರುವುದು ಬೇಡ, ನಾಳೆ ಬಂದು ನಿಮ್ಮ ಫೀಸು ಕೊಡುತ್ತಾರೆ" ಎನ್ನುತ್ತಾ ವಿಸಿಟಿಂಗ್ ಕಿಟ್ಟನ್ನು ನನ್ನ ಕೈಗೆ ವಾಪಸ್ ಇಟ್ಟು ಹಾಗೆ ಹೊರಟು ಹೋಗುವುದೇ? ಅಂತೂ ಆ ಅಪರಾತ್ರಿಯಲಿ ಬ್ಯಾಗ್ ಹಿಡಿದು ಒಬ್ಬನೇ ಮನೆಗೆ ವಾಪಸ್ ಆಗಿದ್ದೆ.

ಆ ರಾತ್ರಿಯಲ್ಲಿ, ಹಳ್ಳ ದಿಣ್ಣೆ ಅಂತ ಅಷ್ಟೊಂದು ತೊಂದರೆ ತೆಗೆದುಕೊಂಡು

ಹೋಗಿದ್ದರೂ, ಸರ್ವಿಸ್ ತೆಗೆದುಕೊಳ್ಳದ ಮೇಲೆ ಶುಲ್ಕ ಏಕೆ ಕೊಡಬೇಕು? ಎನ್ನುವ ಯೋಚನೆ ಅವರದು. ಶುಲ್ಕದ ವಿಚಾರ ಬಿಡಿ, ಕನಿಷ್ಠಪಕ್ಷ ಒಂದು ಕೃತಜ್ಞತೆ ಸಲ್ಲಿಸಲಾದರೂ ಗರ್ಭಿಣಿಯ ಕಡೆಯವರು ಯಾರಾದರೂ ನನ್ನಲ್ಲಿಗೆ ಬರುವ ಸೌಜನ್ಯ ತೋರಿದ್ದರೆ ಸಾಕಿತ್ತು. ಆದರೆ ಅವರಿಂದ ಕೃತಜ್ಞತೆಯ ನುಡಿಯೂ ದೊರೆತಿರಲಿಲ್ಲ.

# ಪ್ರಕಾಶನ ಬೆರಳು ನೋವು

ಶಿವರಾಮು, ನನ್ನ ದೂರದ ಸಂಬಂಧಿಯಾಗಿದ್ದರು. ಕುಟುಂಬದಲ್ಲಿ ಯಾರಿಗಾದರೂ ಅನಾರೋಗ್ಯ ಸಮಸ್ಯೆ ಕಾಡಿದಾಗ, ನನ್ನಲ್ಲಿ ಸಲಹೆಗೆ ಅಥವಾ ಎರಡನೆಯ ಅಭಿಪ್ರಾಯಕ್ಕೆ (second opinion) ಬರುತ್ತಿದ್ದರು. ಅವರ ಮಗ ಪ್ರಕಾಶ ಬಾಲ್ಯದಿಂದಲೂ ನನ್ನ ಕಣ್ಣೆದುರಲ್ಲಿ ಬೆಳೆದ ಹುಡುಗ. ಈವಾಗ, ಇಪ್ಪತ್ಮೂರು ಇಪ್ಪತ್ನಾಲ್ಕು ವರ್ಷ ಪ್ರಾಯವಿರಬಹುದು. ಆತ ಮುಂಬೈನ ಐ.ಐ.ಟಿಯಲ್ಲಿ ವ್ಯಾಸಂಗ ಮಾಡುತ್ತಿರುವಾಗ, ಅಂದರೆ ಸಾಧಾರಣ ಐದಾರು ವರ್ಷಗಳ ಹಿಂದೆ ಒಂದು ದಿನ ಶಿವರಾಮರು ಮಗನೊಂದಿಗೆ ನನ್ನ ಕ್ಲಿನಿಕ್ಕಿಗೆ ಬಂದರು.

ಬಂದವರೆ, "ಹಂದೆಯವರೇ, ನನ್ನ ಮಗನಿಗೆ ಒಂದು ಸಣ್ಣ ಸಮಸ್ಯೆ ಇದೆ. ಆರೇಳು ತಿಂಗಳುಗಳಿಂದ ಡಾಕ್ಟರುಗಳ ಔಷಧೋಪಚಾರ ನಡೆಯುತ್ತಿದ್ದರೂ ಏನೂ ಪ್ರಯೋಜನ ಕಾಣುತ್ತಾ ಇಲ್ಲ" ಎಂದರು.

"ಏನು ಸಮಸ್ಯೆ?" ಎಂದು ವಿಚಾರಿಸಿದೆ.

ಶಿವರಾಮರು ಮಗ ಪ್ರಕಾಶನಿಗೆ, ಕೈಯನ್ನು ತೋರಿಸಲು ಹೇಳಿದರು. ಆತನ ಬಲಗೈಯ ತೋರು ಬೆರಳು ಹಾಗು ಮಧ್ಯದ ಬೆರಳಿನ ಬುಡದಲ್ಲಿ ಊದಿಕೊಂಡಿತ್ತು. ಅಂದರೆ ಬೆರಳಿನ ಬುಡದ ಕೀಲು ಹಾಗೂ ಒಂದನೆಯ ಕೀಲಿನ ಮಧ್ಯೆ ಊತ ಕಾಣಿಸಿಕೊಂಡಿತ್ತು. 'ನೋವಿದೆಯಾ?' ಎಂದು ವಿಚಾರಿಸಿದಾಗ, 'ಸಹಿಸಲಸಾಧ್ಯವಾದ ನೋವೇನು ಇಲ್ಲವಾದರೂ ಸ್ವಲ್ಪ ನೋವಿದೆ' ಎಂದ ಪ್ರಕಾಶ.

ಪ್ರಕಾಶ ಮುಂಬೈಯಲ್ಲಿ ಹಾಸ್ಟೆಲ್‌ನಲ್ಲಿ ವಾಸವಾಗಿದ್ದ. ಹಾಗೆ ಆತನಿಗೆ ಟೇಬಲ್ ಟೆನಿಸ್ ಆಡುವ ಹವ್ಯಾಸವಿತ್ತು. ಹೀಗೆ ಆಟವಾಡುವಾಗ ಕೈ ಭಾಗಕ್ಕೆ ಏಟಾಗಿ ಅಲ್ಲಿ ಊದಿಕೊಂಡಿದೆ ಎಂದು ತನ್ನರಿವಿಗೆ ಬಂದ ಕಾರಣ ತಿಳಿಸಿದ.

'ಹೌದು, ಆಟವಾಡುವಾಗ ಏಟಾಗಿ ಊದಿಕೊಂಡಿರಬಹುದಾದರೂ, ಇಷ್ಟು ಸಮಯದಲ್ಲಿ (ಏಳೆಂಟು ತಿಂಗಳು) ಗುಣವಾಗಬೇಕಿತ್ತಲ್ಲ?' ಎನ್ನುವ ಯೋಚನೆಯೊಂದಿಗೆ,

'ಈ ತನಕ ಏನೆಲ್ಲ ಚಿಕಿತ್ಸೆ ಪಡೆದಿದ್ದೆ? ಹಾಗೂ ಯಾವ್ಯಾವ ಡಾಕ್ಟರ್‌ರಲ್ಲಿ ಪರೀಕ್ಷಿಸಿಕೊಂಡಿದ್ದೆ?' ಎಂದು ವಿಚಾರಿಸಿದೆ. ಆತ ಈವರೆಗೆ ನಡೆಸಿದ ಟೆಸ್ಟ್

ರಿಪೋರ್ಟ್, ಅಂಗೈ ಎಕ್ಸ್‌ರೆ ಇತ್ಯಾದಿ ವಿವರಗಳ ಫೈಲನ್ನೇ ನೀಡಿದ ಒಂದೊಂದಾಗಿ ಗಮನಿಸಿ ನೋಡತೊಡಗಿದೆ. ಪ್ರಥಮವಾಗಿ ಮುಂಬೈಯಲ್ಲಿಯೇ ಒಬ್ಬರು ಉತ್ತಮ ಮೂಳೆ ಡಾಕ್ಟರ್‌ಗೆ (Orthopaedic surgeon) ತೋರಿಸಿದ್ದರು. ಅವರು ಬೆರಳಿನ ಮೂಳೆಯ ಎಕ್ಸ್‌ರೆ ಹಾಗೂ ರಕ್ತದ ಕೆಲವು ಟೆಸ್ಟ್‌ಗಳನ್ನು ಬರೆದಿದ್ದರು. ಇದು ಯಾವ ಕಾಯಿಲೆ ಇರಬಹುದು ಎಂದು (ವೈದ್ಯಕೀಯದಲ್ಲಿ Differential diagnosis) ಒಂದು ಲಿಸ್ಟ್ ಅನ್ನು ಬರೆದಿದ್ದರು. ಅದನ್ನು ನೋಡತೊಡಗಿದೆ.

Tuberculous osteitis (ಮೂಳೆಯ ಟಿ.ಬಿ.), ರುಮಾಟೈಡ್ ಆರ್ಥ್ರೈಟಿಸ್, ಸೋರಿಯಾಟಿಕ್ ಆರ್ಥ್ರೈಟಿಸ್, ಸಿಂಪಲ್ ಆಂಡ್ ಸಾಫ್ಟ್ ಟಿಶ್ಯೂ ಇಂಜುರಿ, ಸಿಸ್ಟಮಿಕ್ ಲೂಪಸ್.... ಎಂದೂ ಇನ್ನೂ ಕೆಲವು ರೋಗಗಳನ್ನು ಹೆಸರಿಸಿದ್ದರು. ಪಾಪ ಸರಿಯಾದ ದಾರಿಯಲ್ಲಿಯೇ ಯೋಚಿಸಿದ್ದರಾದರೂ, ಕೊನೆಯಲ್ಲಿ ಏನೋ ಒಂದು ಚಿಕಿತ್ಸೆ, ಮಾತ್ರೆ ಬರೆದಿದ್ದರು. ಅದರಿಂದ ಏನೂ ಗುಣಮುಖ ಕಾಣಲಿಲ್ಲವಾಗಿತ್ತು.

ನಂತರ ಪ್ರಕಾಶ ಬೆಂಗಳೂರಿಗೆ ಬಂದು, ಇಲ್ಲಿಯ ಒಬ್ಬರು ಹೆಸರಾಂತ ಆರ್ಥೋಪೆಡಿಕ್ ಡಾಕ್ಟರನ್ನು ಭೇಟಿಯಾಗಿ ತಪಾಸಣೆ ಮಾಡಿಸಿಕೊಂಡಿದ್ದ. ಅವರು, 'ಗಾಬರಿಯಾಗ ಬೇಕಾಗಿರುವುದೇನೂ ಆಗಿಲ್ಲ. ಇದು ಟೇಬಲ್ ಟೆನಿಸ್ ಆಡುವಾಗ ಬೆರಳಿಗಾದ ಏಟಿನಿಂದ ಸಂಭವಿಸಿರುವ ತೊಂದರೆ, ಬಿಸಿನೀರಿನ ಶಾಖ ಕೊಟ್ಟುಕೊಳ್ಳಿ' ಎಂದು ನೋವಿಗೆ ಹಾಗೂ ಇನ್‌ಫ್ಲಮೇಶನ್‌ಗೆ ಸಂಬಂಧಿಸಿದ ಮಾತ್ರೆಗಳನ್ನು ಬರೆದು ಕೊಟ್ಟಿದ್ದರು. ಆದರೂ ಇದರಿಂದಲೂ ಏನೊಂದೂ ಪರಿಣಾಮವಾಗಿರಲಿಲ್ಲ.

ಇಷ್ಟೆಲ್ಲಾ ಆದನಂತರ, ನನ್ನ ಅಭಿಪ್ರಾಯದಲ್ಲಿ ದೃಢನಂಬಿಕೆ ಹಾಗೂ ರೋಗ ಪತ್ತೆ ಹಚ್ಚುವಲ್ಲಿ ವಿವಿಧ ಆಯಾಮಗಳಿಂದ ಚಿಂತಿಸಿ, ಕಾರ್ಯಪ್ರವೃತ್ತನಾಗುವ ನನ್ನ ದೂರ ದೃಷ್ಟಿ ಹಾಗೂ ಆಲೋಚನೆ ಮನಗಂಡಿದ್ದ ಶಿವರಾಮರು ಮಗನನ್ನು ನನ್ನಲ್ಲಿಗೆ ಕರೆದುಕೊಂಡು ಬಂದಿದ್ದರು. ಹಾಗೂ 'ಇಷ್ಟರವರೆಗೆ ಈ ತರಹ ನಡೆದಿದೆ, ಏನಿದ್ದರೂ ನೀವೇ ಒಂದು ಸರಿಯಾದ ಚಿಕಿತ್ಸಾ ಮಾರ್ಗ ತೋರಿಸಬೇಕು' ಎಂದರು. ಸರಿ ನನಗೂ ಇದೊಂದು ಸೋಜಿಗವಾಗಿ ಕಂಡಿತು. ಇಂತಹ ಸಂಕೀರ್ಣ, ಸುಪ್ತ ಕಾಯಿಲೆಗಳೇ ನಮ್ಮ ಯೋಚನಾ ಶಕ್ತಿಗೆ ಸಾಣೆಗಲ್ಲಾಗಿರುತ್ತವೆ.

ಸರಿ, ನನ್ನ ಸ್ನೇಹಿತ ರುಮಾಟೋಲಜಿಸ್ಟ್‌ರವರಿಗೆ ಒಮ್ಮೆ ತೋರಿಸಿ, ಅವರ ಅಭಿಪ್ರಾಯವನ್ನು ಪಡೆದು ಬರುವಂತೆ ತಿಳಿಸಿದೆ. (ರುಮಾಟೊಲೊಜಿ ಎಂದರೆ, ವೈದ್ಯಕೀಯದಲ್ಲಿ ಕೀಲು ಮತ್ತು ಕೀಲಿಗೆ ಸಂಬಂಧಿಸಿದ ಇಮ್ಯೂನ್ ಕಾಯಿಲೆಗಳ ಕುರಿತು ಸೂಪರ್ ಸ್ಪೆಷಾಲಿಟಿ ಶಾಸ್ತ್ರ). ನನ್ನ ಸ್ನೇಹಿತರು, ಪ್ರಕಾಶನನ್ನು ಪರೀಕ್ಷಿಸಿ,

ಸೋರಿಯಾಟಿಕ್ ಆರ್ಥ್ರೈಟಿಸ್ ಇರಬಹುದು ಎಂದು ಶಂಕಿಸಿ, ಅದಕ್ಕೆ ಸಂಬಂಧಿಸಿದ ಮಾತ್ರೆ, ಚಿಕಿತ್ಸೆಯನ್ನು ಬರೆದುಕೊಟ್ಟರು. ಸೋರಿಯಾಸಿಸ್ ಎಂದರೆ ಚರ್ಮಕ್ಕೆ ಸಂಬಂಧಿಸಿದ ಕಾಯಿಲೆ. ಇದೊಂದು ಆಟೋ ಇಮ್ಯೂನ್‌ನ ಕಾಯಿಲೆಯಾಗಿದ್ದು, ಇದರಲ್ಲಿಯೂ ಕೀಲುಗಳು ಊದುತ್ತವೆ ಹಾಗೂ ನೋವು ಪ್ರಾರಂಭವಾಗುತ್ತದೆ. ಆದರೆ ನನಗೇಕೋ ಅವರ ಅಭಿಪ್ರಾಯ ಸರಿ ಎನಿಸಲಿಲ್ಲವಾದ ಕಾರಣ, ಹಾಗೆಯೇ ಶಿವರಾಮ ಹಾಗೂ ಪ್ರಕಾಶನಿಗೆ ತಿಳಿಸಿದೆ.

ಅವಾಗ ಶಿವರಾಮರು, 'ಹಾಗಿದ್ದರೆ ನನ್ನ ಸಂಬಂಧಿಕರು ಒಬ್ಬರು ಮಣಿಪಾಲ ಆಸ್ಪತ್ರೆಯಲ್ಲಿ ರುಮಾಟೋಲಜಿಸ್ಟ್ ಆಗಿದ್ದಾರೆ. ಅವರಿಗೊಮ್ಮೆ ತೋರಿಸಿ ಅಭಿಪ್ರಾಯ ಪಡೆದರೆ ಹೇಗೆ? ಎಂದರು. ನಾನೂ ಅವರ ಅಭಿಪ್ರಾಯವನ್ನು ಬೆಂಬಲಿಸಿದೆ.

ಇದಾಗಿ ನಾಲ್ಕಾರು ದಿನಗಳ ನಂತರ ಶಿವರಾಮರು, ಮಣಿಪಾಲ ಆಸ್ಪತ್ರೆಯ ಟೆಸ್ಟ್ ರಿಪೋರ್ಟ್‌ನೊಂದಿಗೆ ನನ್ನಲ್ಲಿಗೆ ಬಂದರು. ಅಲ್ಲಿನ ಡಾಕ್ಟರು, ಕೈಯ ಎಕ್ಸ್‌ರೆ ನೋಡಿ, ನಂತರ ಕೈಯ ಒಂದು ಎಂ.ಆರ್.ಐ. ಸ್ಕ್ಯಾನ್ ಮಾಡಿಸಿದ್ದರು. ಸ್ಕ್ಯಾನಿಂಗ್ ರಿಪೋರ್ಟ್ ಪ್ರಕಾರ ಪ್ರಕಾಶನ ಕೈ ಬೆರಳಿನ ಕಾಯಿಲೆ ಸಾರ್ಕೈಡೋಸಿಸ್ ಎಂದು ಬರೆದಿದ್ದರು.

ನನಗೆ ಈ ರಿಪೋರ್ಟ್ ನಂಬಲಿಕ್ಕಾಗಲಿಲ್ಲ. ಸಾರ್ಕೈಡೋಸಿಸ್ (Sarcoidosis) ಎಂದರೆ ಒಂದು ಅಪರೂಪದ ಇಮ್ಯೂನಿಟಿಗೆ ಸಂಬಂಧಿಸಿದ ಕಾಯಿಲೆ. ಹೆಚ್ಚಾಗಿ ಶ್ವಾಸಕೋಶದಲ್ಲಿ ಕಾಣಿಸಿಕೊಳ್ಳುತ್ತದೆಯಾದರೂ ಬೇರೆ ಅಂಗಾಂಶಗಳಲ್ಲಿಯೂ ಕಾಣಿಸಿಕೊಳ್ಳಬಹುದು. ಆದರೆ ಹಿಸ್ಟೋಪೆಥಾಲಜಿಯ ವಿವರಣೆಯಲ್ಲಿ, ಟಿ.ಬಿ.ಯಲ್ಲಿ ಇರುವಂತೆ ಗ್ರೈನುಲೋಮ ಎಂಬ ಇನ್‌ಫ್ಲಮೇಟರಿ ಸೆಲ್ಸ್‌ಗಳ ಗುಂಪಿರುತ್ತದೆ. ಹಾಗೆ ಶಿವರಾಮರಿಗೆ 'ನಿಮ್ಮ ರುಮಾಟೊಲಜಿಸ್ಟ್ ಮುಂದೇನು ಮಾಡುವಂತೆ ಸೂಚಿಸಿದ್ದಾರೆ?' ಎಂದು ಕೇಳಿದೆ.

ಶಿವರಾಮರು, 'ಡಾಕ್ಟರ್ ಇದು ಬಹಳ ಕ್ಲಿಷ್ಟಕರವಾಗಿದೆ. ಆಪರೇಷನ್‌ಮಾಡಿ ಬೆರಳಿನ ಮೂಳೆಯ ಚೂರನ್ನು ತೆಗೆದು ಬಯಾಪ್ಸಿ (ಅಂಗಾಂಶದ ಪರೀಕ್ಷೆ) ಮಾಡುವುದು ಉತ್ತಮ ಎಂದರು' ಎಂದು ತಿಳಿಸಿದರು. ನನಗೆ ಕೂಡ ಹಾಗೆ ಮಾಡುವುದೇ ಉತ್ತಮ ಎನಿಸಿತು. ಏಕೆಂದರೆ ವೈದ್ಯಕೀಯ ಜಗತ್ತಿನಲ್ಲಿ, ರೋಗ ಪತ್ತೆಗೆ ಸರ್ಜಿಕಲ್ ಬಯಾಪ್ಸಿ ವಿಧಾನಕ್ಕೆ ಗೋಲ್ಡ್ ಸ್ಟ್ಯಾಂಡರ್ಡ್(Gold Standard) ಎನ್ನುತ್ತಾರೆ.

ಒಂದು ವಾರದಲ್ಲಿ ಶಿವರಾಮರು, ಬಯಾಪ್ಸಿ ರಿಪೋರ್ಟ್‌ನೊಂದಿಗೆ ಕ್ಲಿನಿಕ್‌ಗೆ ಬಂದಿದ್ದರು. ಈ ಮೊದಲೇ ರಿಪೋರ್ಟನ್ನು ಮಣಿಪಾಲ ಆಸ್ಪತ್ರೆಯ ರುಮಾಟೊಲಜಿಸ್ಟ್‌ರಿಗೂ ತೋರಿಸಿ ಬಂದಿದ್ದರು. ನಮಗಿಬ್ಬರಿಗೂ ದೊಡ್ಡ ಆಘಾತ ಕಾದಿತ್ತು. ಬಯಾಪ್ಸಿ ರಿಪೋರ್ಟ್‌ನ ಪ್ರಕಾರ, ಪ್ರಕಾಶನ

ಬೆರಳಿನಲ್ಲಿನ ಸಮಸ್ಯೆ ಟಿ.ಬಿ. ಕಾಯಿಲೆಯಿಂದಾದ ಊತವಾಗಿತ್ತು. ಬಯಾಪ್ಸಿ ರಿಪೋರ್ಟ್‌ನಲ್ಲಿ ಫೆಥಾಲಜಿಸ್ಟ್ ವಿವರವಾಗಿ ಬರೆದಿದ್ದರು. ಸೆಲ್ಸ್ ಅನ್ನು A.F.B. ಟೆಸ್ಟ್ (ಬ್ಯಾಕ್ಟೀರಿಯಾದ ಇರುವಿಕೆ ತಿಳಿಯುವ ಟೆಸ್ಟ್) ಮಾಡಿದಾಗ ಅದರಲ್ಲಿ ಬ್ಯಾಕ್ಟೀರಿಯಾದ ಇರುವಿಕೆ ದೃಢಪಟ್ಟಿತ್ತು. ಗ್ರೈನುರೋಮಾ ಎಂಬ ಸೆಲ್ಸ್‌ಗಳ ಗುಂಪು ಟಿ.ಬಿ.ಯಲ್ಲಿಯೂ ಕಾಣಿಸಿಕೊಳ್ಳುತ್ತದೆ. ಆ ಕಾರಣದಿಂದಾಗಿ ಎಮ್. ಆರ್. ಐ. ಸ್ಕ್ಯಾನಿಂಗ್ ರಿಪೋರ್ಟ್‌ನಲ್ಲಿ ಸಾರ್ಕೈಡೋಸಿಸ್ ಎಂದು ಬರೆದಿದ್ದರು.

ಹಾಗೆ ಶಿವರಾಮರ ಮಗನ ಕಾಯಿಲೆಯ ಕುರಿತು ಮನೆಯಲ್ಲಿ, ಪತ್ನಿ ಜಯಂತಿಗೆ ತಿಳಿಸಿದೆ. ಏಕೆಂದರೆ ಈ ಕಾಯಿಲೆಯ ಮೂಲದ ಅನ್ವೇಷಣೆ ಬಹಳ ಕುತೂಹಲಕಾರಿಯಾಗಿತ್ತು. ಆಗ ಆಕೆ, ಈ ಹುಡುಗ ಪ್ರಕಾಶ ಚಿಕ್ಕಮಗುವಿದ್ದಾಗಿನ ಒಂದು ಘಟನೆಯನ್ನು ಜ್ಞಾಪಿಸಿಕೊಂಡು ಪ್ರಸ್ತಾಪಿಸಿದಳು. 'ಹೌದು ಈ ಹುಡುಗ ಮಗುವಾಗಿರುವಾಗ ಒಮ್ಮೆ, ಕುತ್ತಿಗೆಯಲ್ಲಿ ಒಂದು ಸಣ್ಣ ಹುಣ್ಣಾಗಿದೆ ಎಂದು ನಿಮ್ಮ ಹತ್ತಿರ ತಪಾಸಣೆಗೆ ಬಂದಿದ್ದರು. ಆಗ ನೀವು ಇದು ಟಿ.ಬಿ. ಗ್ಲ್ಯಾಂಡ್ಸ್ ಇರಬಹುದೇ? ಎನ್ನುವ ಸಂಶಯ ವ್ಯಕ್ತಪಡಿಸಿದ್ದೀರಿ' ಎಂದಳು. ಹೌದು ಈಗ ಜಯಂತಿ ನೆನೆಸಿದ ಮೇಲೆ ನನಗೂ ಅರಿವಾಯಿತು. ಆವಾಗ ಆ ಹುಣ್ಣು ಅದ್ಹೇಗೋ ಗುಣವಾಗಿತ್ತು. ಈಗ ನನಗೆ ಪ್ರಕಾಶನ, ಅಪರೂಪದ ಬೆರಳಿನ ಟಿ.ಬಿ. ಕಾಯಿಲೆಯ ಜಾಡು ನಿಧಾನವಾಗಿ ಅರ್ಥವಾಗತೊಡಗಿತು. ಚಿಕ್ಕ ಮಗು ಇರುವಾಗ ನಾನು ಸಂದೇಹಿಸಿದಂತೆ, ಆ ಟಿ.ಬಿ. ಗ್ಲಾಂಡ್ಸ್ ಅವನ ಇಮ್ಯೂನಿಟಿಯಿಂದಾಗಿ ಹಾಗೇ ಗುಣವಾಗಿತ್ತು. ಆದರೆ ಕೆಲವು ಟಿ.ಬಿ. ಬ್ಯಾಕ್ಟೀರಿಯಗಳು, ದೇಹದಲ್ಲಿ ಬಹುಶಃ ಲಿಂಫ್ ನೋಡ್ ಡೋರ್ಮೆಂಟ್ ಆಗಿ ಉಳಿದಿರುತ್ತದೆ. ಈಗ ಅವನು ಟೇಬಲ್ ಟೆನಿಸ್ ಆಡುವಾಗ, ಕೈ ಬೆರಳಿಗೆ ಏಟಾಗಿ, ಅಲ್ಲಿನ ಅಂಗಾಂಶಗಳಲ್ಲಿ ರಕ್ತಸ್ರಾವವಾಗಿರುತ್ತದೆ. ಈ ಸಮಯದಲ್ಲಿ ರಕ್ತದಲ್ಲಿ ಸಂಚರಿಸುವ ಬ್ಯಾಕ್ಟೀರಿಯಾಗಳು ಅಲ್ಲಿ ನೆಲೆ ನಿಂತು ರೋಗವನ್ನು ಪ್ರಾರಂಭಿಸುತ್ತವೆ. ಆಡು ಭಾಷೆಯಲ್ಲಿ ಹೇಳಬೇಕೆಂದರೆ, ಶತ್ರುಗಳು ಮರೆಯಲ್ಲಿದ್ದು ವಿರೋಧಿಯು ದುರ್ಬಲನಾದಾಗ ಆಕ್ರಮಣ ಮಾಡಿದಂತೆ.

ಇದೊಂದು ಬಹಳ ಅಪರೂಪದ ಹಾಗೂ ತುಂಬಾ ಸಂಕೀರ್ಣವಾದ ಟಿ.ಬಿ.ಕಾಯಿಲೆ. ಹಾಗಾಗಿಯೇ ಹೆಚ್ಚಿನ ಮೂಳೆ ತಜ್ಞರು, ರುಮಾಟೊಲಜಿಸ್ಟ್‌ಗಳು ಕ್ಲೀನ್ ಬೌಲ್ಡ್ ಆಗಿದ್ದರು. ಆದರೆ ಪ್ರಕಾಶ, ಪ್ರಥಮದಲ್ಲಿ ಚಿಕಿತ್ಸೆ ಪಡೆದ ಮೂಳೆ ತಜ್ಞರು, ಇದನ್ನು ಪರೀಕ್ಷಿಸಿ, ಅಭಿಪ್ರಾಯ ಪಟ್ಟ ರೋಗಗಳ ಒಂದು ಪಟ್ಟಿಯಲ್ಲಿ, ಇನ್ನಿತರ ಆರೇಳು ಕಾಯಿಲೆಗಳೊಂದಿಗೆ ಟಿ.ಬಿ. ಕಾಯಿಲೆಯ ಬಗ್ಗೆಯೂ ಪ್ರಸ್ತಾಪಿಸಿದ್ದರಾದರೂ, ಕೊನೆಗೆ ಅವರೇ ರುಮಾಟೋಲೊಜಿಸ್ಟ್‌ರಿಗೆ ತೋರಿಸುವ ಸಲಹೆ ನೀಡಿದ್ದರಿಂದ, ಪ್ರಕಾಶ ಬೆಂಗಳೂರಿನ ದಾರಿ ಹಿಡಿದಿದ್ದ.

ಕೊನೆಗೂ ರೋಗದ ಜಾಡು ಹಿಡಿದಾಗಿತ್ತು. ಹುಡುಗನಿಗೆ ಟಿ.ಬಿ.ಗೆ

ಸಂಬಂಧಿಸಿದ ಔಷಧೋಪಚಾರವನ್ನು ಪ್ರಾರಂಭಿಸಿದೆ. ಒಂದೆರಡು ತಿಂಗಳುಗಳಲ್ಲಿಯೇ ಗುಣಮುಖನಾಗಿ, ಬೆರಳಿನ ತೊಂದರೆಗಳೆಲ್ಲ ಮಾಯವಾಗಿ ಮೊದಲಿನಂತಾಗಿದ್ದ. ಆದರೆ ಟಿ.ಬಿ. ಕಾಯಿಲೆಗೆ ಆರು ತಿಂಗಳ ಔಷಧೋಪಚಾರ ಕಡ್ಡಾಯ. ಕೊನೆಗೂ ಶಿವರಾಮರಿಗೆ ಮಗನ ಬೆರಳಿನ ಸಮಸ್ಯೆಗೆ ಪರಿಹಾರ ದೊರೆತು ನೆಮ್ಮದಿಯಾಗಿತ್ತು. ಇದು ನಾನು ನನ್ನ ವೃತ್ತಿ ಜೀವನದಲ್ಲಿ ನೋಡಿದ ಅತಿ ಅಪರೂಪದ ಟಿ.ಬಿ. ಕಾಯಿಲೆ. ಹಾಗಾಗಿ, ನಮ್ಮ ಕುಟುಂಬ ವೈದ್ಯರ ತಿಂಗಳ ಸಭೆಯಲ್ಲಿ ಇದನ್ನು ಸ್ಲೈಡ್ ಮಾಡಿ, ಪ್ರಕಟಪಡಿಸಿ ನನ್ನ ವೈದ್ಯ ಮಿತ್ರರೊಂದಿಗೆ ಅನುಭವಗಳನ್ನು ಹಂಚಿಕೊಂಡಿದ್ದೆ. ಬಹಳ ಅಪರೂಪದ ಕೇಸಾದ ಕಾರಣ ಮಣಿಪಾಲ ಆಸ್ಪತ್ರೆಯ ರುಮಾಟೋಲೊಜಿಸ್ಟ್ ಕೂಡ, ಈ ಕೇಸ್ ಹಿಸ್ಟರಿಯನ್ನು, ಬೆಂಗಳೂರು ರುಮಾಟೊಲೊಜಿಸ್ಟ್ ಕಾನ್ಫರೆನ್ಸ್‌ನಲ್ಲಿಯೂ ಪ್ರಕಟಪಡಿಸಿದ್ದರೆನ್ನುವ ವಿಚಾರ ಕೂಡ ನಂತರದಲ್ಲಿ ತಿಳಿಯಿತು.

# ಪಾರ್ವತಿಯ ಎಸಿಡಿಟಿ ಕಥೆ

ಪಾರ್ವತಿ, ಹತ್ತು ಹನ್ನೆರಡು ವರ್ಷಗಳಿಂದ ನನ್ನಲ್ಲಿಗೆ ಚಿಕಿತ್ಸೆಗೆ, ಸಲಹೆಗೆ ಬರುತ್ತಿದ್ದ ಮಹಿಳೆ. ಆಕೆಗೆ ಎಸಿಡಿಟಿ ಹಾಗೂ ಹವಾಮಾನ ವೈಪರೀತ್ಯವಾದಾಗ ಅಸ್ತಮಾ ತೊಂದರೆ ಕಾಣಿಸಿಕೊಳ್ಳುತ್ತಿತ್ತು. ನನ್ನ ಅನುಭವದ ಪ್ರಕಾರ, ಬಹಳಷ್ಟು ಅಸ್ತಮಾ ರೋಗಿಗಳಲ್ಲಿ ಅಸಿಡಿಟಿ ತೊಂದರೆ ಸಾಮಾನ್ಯವಾಗಿರುತ್ತದೆ.

ಸುಮಾರು ಐದಾರು ವರ್ಷಗಳ ಹಿಂದೆ, ಪಾರ್ವತಿ ಒಂದು ದಿನ ಬೆಳಿಗ್ಗೆ ಕ್ಲಿನಿಕ್‌ಗೆ ಬಂದಳು. ಆಗ ಆಕೆಯ ಪ್ರಾಯ ನಲವತ್ತರ ಆಸುಪಾಸು ಇದ್ದಿರಬಹುದು. ಕ್ಲಿನಿಕ್ಕಿಗೆ ಬಂದವಳೇ, "ಡಾಕ್ಟ್ರೇ ನನಗೆ ಅಸಿಡಿಟಿ ಜಾಸ್ತಿಯಾಗಿ ಹೊಟ್ಟೆಯ ಮೇಲ್ಭಾಗದಲ್ಲಿ, ಎದೆಯಿಂದ ಸ್ವಲ್ಪ ನೋವು ಪ್ರಾರಂಭವಾಗಿದೆ. ಅಲ್ಲದೆ ಈಗೆರಡು ದಿನಗಳಿಂದ ಸಣ್ಣ ಜ್ವರವು ಬರುತ್ತಿದೆ. ಅಥವಾ ಮೈಕೈ ನೋವಿಗೆ ಜ್ವರದ ಫೀಲಿಂಗ್ ಇರಬಹುದು. ಹಾಗೆ ನಿನ್ನೆಯಿಂದ ಗಂಟಲಿನಲ್ಲೂ ಸ್ವಲ್ಪ ನೋವು ಪ್ರಾರಂಭವಾಗಿದೆ ಎಂದಳು. ಆಕೆಯನ್ನು ಪರೀಕ್ಷಿಸಿ ಗಂಟಲು ನೋವಿನಿಂದ ಜ್ವರ ಬಂದಿರಬೇಕೆಂದು ಯೋಚಿಸಿ, ಆಂಟಿಬಯೋಟಿಕ್ ಹಾಗೂ ಎಸಿಡಿಟಿ ಗೆ ಸಂಬಂಧಿಸಿದ ಔಷಧಿಗಳನ್ನು ಬರೆದು ಕೊಟ್ಟೆ.

ಸಂಜೆಯೇ ಪಾರ್ವತಿ ಫೋನ್ ಮಾಡಿ, "ಡಾಕ್ಟ್ರೇ, ನನಗೆ ಆ ಆಂಟಿಬಯೋಟಿಕ್‌ನಿಂದ ಎಸಿಡಿಟಿ ಜಾಸ್ತಿಯಾಗಿದೆ. ಹಾಗಾಗಿ ಮಾತ್ರೆ ಬದಲಾಯಿಸಿ ಕೊಡುತ್ತೀರಾ?" ಎಂದು ಕೇಳಿದಳು. ಸರಿ, (ರೋಗಿಗಳು ಸಾಮಾನ್ಯವಾಗಿ ರೋಗಲಕ್ಷಣ ಜಾಸ್ತಿಯಾದಾಗ ನಾವು ಕೊಟ್ಟ ಔಷಧದಿಂದಲೇ ಜಾಸ್ತಿಯಾಗಿದೆ ಎಂದು ತಿಳಿಯುತ್ತಾರೆ) ಅವಳ ಸಮಾಧಾನಕ್ಕೆ ಆಂಟಿಬಯೋಟಿಕ್ ಬದಲಿಸಿ ತೆಗೆದುಕೊಳ್ಳುವಂತೆ ತಿಳಿಸಿದೆ. ಹೀಗೆ ಒಂದೆರಡು ದಿನ ಆಕೆಯಿಂದ ಫೋನ್ ಬಾರದಿದ್ದಾಗ ಬಹುಶಃ ಕಾಯಿಲೆ ಕಡಿಮೆ ಆಗಿರಬಹುದು ಎಂದು ಭಾವಿಸಿದೆ.

ಆದರೆ ಇನ್ನೊಂದು ದಿನ ಕಳೆದಿರಬಹುದು, ರಾತ್ರಿ 10 ಗಂಟೆಯಲ್ಲಿ ನಾನು ಕ್ಲಿನಿಕ್ ಮುಚ್ಚುವ ಸಮಯದಲ್ಲಿ, ಪಾರ್ವತಿಯ ಅಕ್ಕ ಮಂಜುಳಾ, ನನಗೆ ಫೋನ್ ಮಾಡಿದಳು. ಆಕೆ, 'ಪಾರ್ವತಿಗೆ ಹಿಂದಿನ ದಿನ ಎಸಿಡಿಟಿಯಿಂದ ವಿಪರೀತ ಹೊಟ್ಟೆ ನೋವು, ಎದೆ ನೋವು ಕಾಣಿಸಿಕೊಂಡ ಕಾರಣ ಮನೆ ಪಕ್ಕದ ಲಕ್ಷ್ಮಿ ನರ್ಸಿಂಗ್ ಹೋಂಗೆ ಅಡ್ಮಿಟ್ ಮಾಡಿರುವುದಾಗಿ ತಿಳಿಸಿದಳು.

ನರ್ಸಿಂಗ್ ಹೋಮ್‌ನ ಲೇಡಿ ಡಾಕ್ಟರ್, ಅಲ್ಟ್ರಾ ಸೌಂಡ್ ಸ್ಕ್ಯಾನಿಂಗ್ ಮಾಡಲು ಸೂಚಿಸಿದ್ದರು. ಅದರಂತೆ ಸ್ಕ್ಯಾನಿಂಗ್ ರಿಪೋರ್ಟ್‌ನಲ್ಲಿ ಹೊಟ್ಟೆಯ ಭಾಗದಲ್ಲಿ ಏನೂ ತೊಂದರೆ ಕಂಡು ಬಂದಿರಲಿಲ್ಲ. ಆದರೆ ಎದೆಯಲ್ಲಿ, ಹೃದಯದ ಹೊರ ಭಾಗದಲ್ಲಿ ನೀರು ತುಂಬಿರುವುದು ಗೋಚರಿಸಿತ್ತು. ಕೂಡಲೇ ಸಿಟಿ ಸ್ಕ್ಯಾನ್ ಮಾಡುವಂತೆ ತಿಳಿಸಿದ್ದರು. ಹಾಗೆ ಸಿಟಿ ಸ್ಕ್ಯಾನ್‌ನಿಂದಾಗಿ ಹೃದಯದ ಹೊರ ಭಾಗದಲ್ಲಿ ನೀರು ತುಂಬಿಕೊಂಡಿರುವುದು ದೃಢಪಟ್ಟಿತ್ತು. ಕೂಡಲೇ ರೋಗಿಯ ಬಗೆಗಿನ ಕಾಳಜಿ ನನ್ನಲ್ಲಿ ಜಾಗೃತವಾಯಿತು.

ಹೃದಯದ ಹೊರ ಭಾಗದಲ್ಲಿ ನೀರು ತುಂಬಿಕೊಂಡಿದೆ ಎಂದರೆ ಇದೊಂದು ಗಂಭೀರ ಕಾಯಿಲೆ. ಈ ಕಾಯಿಲೆಯನ್ನು ಪೆರಿ ಕಾರ್ಡಿಟಿಸ್ ಎಂದು ಹೇಳುತ್ತಾರೆ. ತ್ವರಿತವಾಗಿ ಚಿಕಿತ್ಸೆ ದೊರೆಯದಿದ್ದಲ್ಲಿ ಈ ಕಾಯಿಲೆ ಮಾರಣಾಂತಿಕವಾಗಬಹುದು. ಇಲ್ಲಿ ಹೃದಯದ ಅಂಗ ರಚನೆಯ ಬಗ್ಗೆ ತಿಳಿಯಬೇಕಾಗುತ್ತದೆ. ಹೃದಯ, ಪೆರಿಕಾರ್ಡಿಯಮ್ ಎಂಬ ಚೀಲದಂತಹ ಕವಚದಲ್ಲಿ ಇರುತ್ತದೆ,. ಪೆರಿಕಾರ್ಡಿಯಂ ಕವಚದ ಇನ್ಫೆಕ್ಷನ್‌ನಿಂದ ಅಥವಾ ಇನ್ನಿತರ ಕೆಲವು ಆಟೋ ಇಮ್ಯೂನ್ ಕಾಯಿಲೆಗಳಿಂದ ಹೃದಯದ ಸುತ್ತ ಈ ಕವಚದಲ್ಲಿ ದ್ರವ ತುಂಬುತ್ತದೆ. ಇದರಿಂದ ಒತ್ತಡ ಏರ್ಪಟ್ಟು ಹೃದಯ ಸ್ತಂಭನಗೊಂಡು ರೋಗಿ ಸಾವನ್ನಪ್ಪಬಹುದು. ಈ ಇನ್ಫೆಕ್ಷನ್, ವೈರಸ್‌ನಿಂದ ಇತರ ಬ್ಯಾಕ್ಟೀರಿಯಾಗಳಿಂದ ಅಥವಾ ಟಿಬಿ ಬ್ಯಾಕ್ಟೀರಿಯಾದಿಂದಲೂ ಉಂಟಾಗಬಹುದು. ಏನೇ ಇರಲಿ, ಇದು ಬಹಳ ಎಮರ್ಜೆನ್ಸಿ ಆಗಿರುವುದರಿಂದ ಕೂಡಲೇ ರೋಗಿಯನ್ನು ಹಾರ್ಟ್ ಸೆಂಟರ್‌ನಲ್ಲಿ ಅಡ್ಮಿಟ್ ಮಾಡಿ, ಹೃದಯ ಕವಚದಲ್ಲಿದ್ದ ನೀರನ್ನು ತೆಗೆಯಬೇಕಾಗುತ್ತದೆ ಹೀಗೆ ಯೋಚಿಸುತ್ತಿರುವಾಗಲೇ ಮಂಜುಳಾ, "ಡಾಕ್ಟರ್ ನೀವೇ ಒಂದು ಸಾರಿ ನರ್ಸಿಂಗ್ ಹೋಂಗೆ ಬಂದು ಏನು ಮಾಡಬೇಕೆಂಬ ಸಲಹೆ ಕೊಡ್ತೀರಾ?" ಎಂದು ಬಹಳ ಗಾಬರಿಯಿಂದಲೇ ಕೇಳಿದಳು.

ಸರಿ ಕೂಡಲೇ ಕ್ಲಿನಿಕ್ ಮುಗಿಸಿ, ನರ್ಸಿಂಗ್ ಹೋಂಗೆ ಧಾವಿಸಿದೆ. ಅಲ್ಲಿ ಪಾರ್ವತಿಯನ್ನು ನೋಡಿ, ಹಾಗೆ ನರ್ಸಿಂಗ್ ಹೋಮ್‌ನ  ಡಾಕ್ಟರ್ ಬಳಿ ಪಾರ್ವತಿಯ ರೋಗ ಗಂಭೀರತೆಯ ಬಗ್ಗೆ ಸಮಾಲೋಚಿಸಿ, ಕೂಡಲೇ ಜಯದೇವ ಆಸ್ಪತ್ರೆಗೆ ರವಾನಿಸುವ ಏರ್ಪಾಟು ಮಾಡಿದೆವು. ಹಾಗೆ ಜಯದೇವ ಆಸ್ಪತ್ರೆ ವೈದ್ಯರಿಗೂ ಈ ಎಮರ್ಜೆನ್ಸಿಯ ಬಗ್ಗೆ ತಿಳಿಸಿದೆವು. ಕೂಡಲೇ ಜಯದೇವ ಆಸ್ಪತ್ರೆಯಲ್ಲಿಯೂ ಪಾರ್ವತಿಯ ಜೀವ ರಕ್ಷಣೆಗೆ ಹೃದಯ ವೈದ್ಯರ ತಂಡ ರೆಡಿಯಾಗಿತ್ತು. ರೋಗಿಯನ್ನು ಕಳುಹಿಸಿದ ತಕ್ಷಣ,  ರಾತ್ರೋರಾತ್ರಿ ಶಸ್ತ್ರಚಿಕಿತ್ಸೆಗೆ ಒಳಪಡಿಸಿ, ಪೆರಿ ಕಾರ್ಡಿಯಲ್ ಸೆಲ್‌ನಿಂದ ದ್ರವವನ್ನು ಹೊರ ತೆಗೆದರು. ಹಾಗೆ, ಸ್ವಲ್ಪ ದ್ರವವನ್ನು ಪರೀಕ್ಷೆಗಾಗಿ ಲ್ಯಾಬೋರೇಟರಿಗೆ ಕಳುಹಿಸಿದ್ದರು.

ಬೆಳಿಗ್ಗೆ ಆಕೆಯ ಅಕ್ಕ ಫೋನ್ ಮಾಡಿ, 'ಪಾರ್ವತಿ ಈವಾಗ ಚೆನ್ನಾಗಿದ್ದಾಳೆ, ಉಸಿರಾಟಕ್ಕೇನು ತೊಂದರೆ ಆಗ್ತಾ ಇಲ್ಲ, ಇನ್ನೊಂದು ವಾರ ಆಸ್ಪತ್ರೆಯಲ್ಲಿ ಇರಬೇಕಂತೆ' ಎಂದಾಗ ನಾನು ನಿರಾಳನಾಗಿದ್ದೆ. ಆದರೆ ಆ ದ್ರವ ಪರೀಕ್ಷೆಯಿಂದ ಪೆರಿಕಾರ್ಡಿಟಿಸ್‌ಗೆ ಕಾರಣವೇನೆಂದು ಗೊತ್ತಾಗಲಿಲ್ಲ. ಆದರೆ ಮುಖ್ಯವಾಗಿ ಟಿ.ಬಿ. ಬ್ಯಾಕ್ಟೀರಿಯದಿಂದ ಈ ರೀತಿ ಆಗುವುದು ಸಾಮಾನ್ಯ ಎಂದು, ಒಂದು ವರ್ಷಗಳ ಕಾಲ ಟಿಬಿ ಔಷಧ ತೆಗೆದುಕೊಳ್ಳಲು ಸೂಚಿಸಿದ್ದರು.

ಇದಾಗಿ ಒಂದು ತಿಂಗಳ ನಂತರ ಪಾರ್ವತಿ ನನ್ನ ಕ್ಲಿನಿಕ್ಕಿಗೆ ಬಂದಳು. ಆಕೆಯ ಮುಖದಲ್ಲಿ ಆರೋಗ್ಯದ ಕಳೆ ಕಾಣಿಸುತ್ತಿತ್ತು. ಆಶ್ಚರ್ಯದ ವಿಷಯವೆಂದರೆ ಅವಳ ಕಾಯಿಲೆಯ ಕೇಸಿನಲ್ಲಿ ಆಕೆಗೆ ಬಹಳ ದಿನಗಳಿಂದ ಜ್ವರವೇ ಇರಲಿಲ್ಲ. ಅಲ್ಲದೆ ಪೆರಿಕಾರ್ಡಿಟಿಸ್‌ನಿಂದ ಉಂಟಾದ ನೋವು ಎಸಿಡಿಟಿ ನೋವಿನಂತೆ ಕಾಣಿಸುತ್ತಿತ್ತು. ಆಕೆ ತಿಳಿಸಿದ ಗಂಟಲು ನೋವು ಕೂಡ ರೆಫರೆಡ್ (Refered pain) ನೋವು ಎನ್ನುತ್ತೇವೆ. ಕ್ಲಿನಿಕ್ ಟೆಸ್ಟ್ ಮಾಡುವಾಗ ಈ ತರದ ಲಕ್ಷಣಗಳು, ವೈದ್ಯರ ರೋಗ ಪತ್ತೆ ವಿಧಾನದ ದಾರಿ ತಪ್ಪಿಸುವ ಸಂಭವವೂ ಇರುತ್ತದೆ. ಪಾರ್ವತಿಯ ಅದೃಷ್ಟಕ್ಕೆ ಜಯದೇವ ಆಸ್ಪತ್ರೆ ವೈದ್ಯರ ತಂಡ, ರಾತ್ರೋರಾತ್ರಿ ಕಾರ್ಯಪ್ರವೃತ್ತರಾಗಿ, ಶಸ್ತ್ರಚಿಕಿತ್ಸೆ ನಡೆಸಿ, ಪೆರಿಕಾರ್ಡಿಯಮ್‌ನಿಂದ ದ್ರವವನ್ನು ಹೊರತೆಗೆದು, ಆಕೆಯ ಪ್ರಾಣ ಕಾಪಾಡಿದ್ದರು.

ಒಂದು ವೇಳೆ ಮಂಜುಳಾ, ಈ ರಾತ್ರಿ ಕಳೆಯಲಿ, ಬೆಳಿಗ್ಗೆ ಕುಟುಂಬ ವೈದ್ಯರಿಗೆ ತಿಳಿಸಿದರಾಯಿತು ಎಂದೇನಾದರೂ ಯೋಚಿಸಿದ್ದರೆ, ಬಹುಶಃ ರೋಗಿಗೆ ಆ ರಾತ್ರಿಯೇ ಕೊನೆಯದಾಗುತ್ತಿತ್ತೇನೋ? ಕೊನೆಗೂ ರಾತ್ರೋರಾತ್ರಿ ನರ್ಸಿಂಗ್ ಹೋಮ್‌ನ ಡಾಕ್ಟರ್‌ಗೆ ಪರಿಸ್ಥಿತಿಯ ಗಂಭೀರತೆ ತಿಳಿಸಿ, ಜಯದೇವ ಆಸ್ಪತ್ರೆಗೆ ರವಾನಿಸಿ, ಚಿಕಿತ್ಸೆ ದೊರೆತು ಆಕೆ ಸುಧಾರಿಸಿದ್ದಳು. ಒಬ್ಬ ಕುಟುಂಬ ವೈದ್ಯನಾಗಿ, ನನ್ನ ರೋಗಿಯ ಸಂಕೀರ್ಣ ಪರಿಸ್ಥಿತಿಯನ್ನು, ನನ್ನ ಕರ್ತವ್ಯ ನಿರ್ವಹಣೆಯನ್ನು ಯಶಸ್ವಿಯಾಗಿ ನಿಭಾಯಿಸಿದ ತೃಪ್ತಿ ನನಗಾಗಿತ್ತು. ಈಗಲೂ ಪಾರ್ವತಿ ಅಸ್ತಮಾ ಹಾಗೂ ಎಸಿಡಿಟಿ ಸಮಸ್ಯೆಗಳಿಗೆ ಸಲಹೆ ಕೇಳಲು ನನ್ನಲ್ಲಿಗೆ ಬರುತ್ತಿರುತ್ತಾಳೆ.

# ರಿಪೋರ್ಟ್ ನಂಬಿ ಕೆಟ್ಟೆ

ಪ್ರಸ್ತುತ ವೈದ್ಯ ವಿಜ್ಞಾನದ ಆಧುನಿಕ ಆವಿಷ್ಕಾರಗಳಿಂದಾಗಿ, ರೋಗಿಯ ರೋಗ ಪತ್ತೆಹಚ್ಚಲು ಮೊದಲಿನಂತೆ ಬರೇ ಲಕ್ಷಣ (ರೋಗ) ಕೇಳಿ, ಹಿಸ್ಟರಿ ಅರಿತು, ಕ್ಲಿನಿಕಲ್ ಟೆಸ್ಟ್‌ಗಳಿಂದ ಅರಿಯಬೇಕಾಗಿಲ್ಲ. ಕೆಲವು ರೋಗಗಳನ್ನು ಸುಲಭವಾಗಿ ಪತ್ತೆ ಹಚ್ಚಬಹುದಾದರೂ, ರೋಗಿಗಳಿಗೇ ಕೆಲವೊಂದು ವೈಜ್ಞಾನಿಕ ಪರೀಕ್ಷೆಗಳ ಅನಿವಾರ್ಯತೆ ಕಾಡಬಹುದು. ಇದು ಅವರವರು ನೆಚ್ಚಿದ, ನಂಬಿದ ದಾರಿ! ಆದರೆ ಅತೀ ಸಂಕೀರ್ಣ ಪರಿಸ್ಥಿತಿಯಲ್ಲಿ ರೋಗ ಪತ್ತೆಹಚ್ಚಲು, ರಕ್ತ ಪರೀಕ್ಷೆ, ಮೂತ್ರ ಪರೀಕ್ಷೆ, ಎಕ್ಸರೇ, ಇ.ಸಿ.ಜಿ., ಅಲ್ಟ್ರಾ ಸೌಂಡ್ ಇಮೇಜಿಂಗ್, ಎಂ.ಆರ್.ಐ., ಸಿ.ಟಿ. ಸ್ಕ್ಯಾನ್ ಹೀಗೆ ಹಲವಾರು ಮಾರ್ಗೋಪಾಯಗಳಿವೆ. ಆದರೆ ನಾನು ಎಂ.ಬಿ.ಬಿ.ಎಸ್ ಓದುವಾಗ ಬಳ್ಳಾರಿಯಲ್ಲಿ ಮೆಡಿಕಲ್ ಕಾಲೇಜಿನ ಲ್ಯಾಬೋರೇಟರಿ ಬಿಟ್ಟರೆ ಖಾಸಗಿ ಲ್ಯಾಬೋರೇಟರಿಗಳೆ ಇರಲಿಲ್ಲ.

ಹಾಗೆ ನಾನು ವೃತ್ತಿ ಪ್ರಾರಂಭಿಸಿದ ಬ್ರಹ್ಮಾವರದಲ್ಲಿಯೂ ಈ ತರಹದ ಸೌಲಭ್ಯಗಳಿರಲಿಲ್ಲ. ಹತ್ತಿರದ ಮಣಿಪಾಲ ಆಸ್ಪತ್ರೆಗೆ ಇತರ ಸೌಲಭ್ಯಗಳಿಗೆ ಕಳುಹಿಸಬೇಕಾಗಿತ್ತು. ಖಾಸಗಿ ಪ್ರಾಕ್ಟೀಸ್ ಮಾಡುವವರು, ಅನುಭವ ಹಾಗೂ ಕ್ಲಿನಿಕಲ್ ಪರೀಕ್ಷೆ ಆಧಾರದ ಮೇಲೆ ರೋಗ ನಿರ್ಧರಿಸಿ, ಚಿಕಿತ್ಸೆ ನೀಡುತ್ತಿದ್ದೆವು. ಅತಿ ಸಂಕೀರ್ಣದ ಪರಿಸ್ಥಿತಿಗಳಲ್ಲಿ ಮಣಿಪಾಲಕ್ಕೆ ಕಳುಹಿಸುತಿದ್ದೆವು. ಕೆಲವೊಮ್ಮೆ ಅವರಿಂದ ಪಡೆದ ಲ್ಯಾಬೋರೇಟರಿ ರಿಪೋರ್ಟ್‌ಗಳಿಂದ ಪ್ರಮಾದವಾಗುವ ಪ್ರಸಂಗಗಳು ಬರುತ್ತಿದ್ದವು. ಅಂತಹುದೇ ಕೆಲವೊಂದು ಸಂದರ್ಭಗಳು ನನ್ನ ವೃತ್ತಿ ಅವಧಿಯಲ್ಲಿ ಸಂಭವಿಸಿದ್ದು, ಹಂಚಿಕೊಳ್ಳಲು ಬಯಸುತ್ತೇನೆ.

ಬೆಂಗಳೂರಿನಲ್ಲಿ ಕ್ಲಿನಿಕ್ ಪ್ರಾರಂಭಿಸಿ ಕೆಲವು ವರ್ಷಗಳ ನಂತರ, ಅಂದರೆ 1986-87ರಲ್ಲಿರಬೇಕು. ಅಲ್ಲಿನ ಸರ್ಕಾರಿ ಶಾಲೆಯಲ್ಲಿ ಗುಮಾಸ್ತರಾಗಿ ಕಾರ್ಯನಿರ್ವಹಿಸುತ್ತಿದ್ದ ದೇವರಾಜ ಎನ್ನುವವರು ನನ್ನ ಖಾಯಂ ರೋಗಿಗಳಲ್ಲಿ ಒಬ್ಬರಾಗಿದ್ದರು. ಅವರಿಗೆ ನಾನು ಕುಟುಂಬ ವೈದ್ಯನಾಗಿದ್ದೆ. ಒಂದು ಸಂಜೆ ದೇವರಾಜರು ಪತ್ನಿಯೊಂದಿಗೆ ತಮ್ಮ ಮಗಳು ಸೀತಾಳನ್ನು ಕರೆದುಕೊಂಡು ಬಂದು, "ಡಾಕ್ಟ್ರೇ, ಈಕೆ ನನ್ನ ಮಗಳು. 13 ವರ್ಷ, ಇವಳಿನ್ನು ದೊಡ್ಡವಳಾಗಿಲ್ಲ. ಆದರೆ ಈಗ ಮೂರು ನಾಲ್ಕು ತಿಂಗಳುಗಳಿಂದ, ಪ್ರತಿ ತಿಂಗಳು ಹೊಟ್ಟೆ ನೋವು ಎಂದು ಎರಡು ಮೂರು ದಿನ ಒದ್ದಾಡುತ್ತಾಳೆ. ಸ್ವಲ್ಪ ಪರೀಕ್ಷಿಸಿ ಏನಾಗಿದೆ ಅಂತ ನೋಡ್ತೀರಾ?" ಎಂದು ಕೇಳಿದರು.

ಸರಿ, ಹುಡುಗಿಯನ್ನು ಟೇಬಲ್ ಮೇಲೆ ಮಲಗಿಸಿ ಪರೀಕ್ಷಿಸಿದರೆ, ಗರ್ಭಕೋಶ ಊದಿಕೊಂಡದ್ದು ಸ್ಪರ್ಶಿಸುತ್ತಲೇ ತಿಳಿಯಿತು. ಸುಮಾರು ನಾಲ್ಕು ತಿಂಗಳ ಗರ್ಭಿಣಿ ಹೊಟ್ಟೆಯಷ್ಟು ದೊಡ್ಡದಾಗಿ ಕಾಣುತ್ತಿತ್ತು. ನನಗೆ ಮೊದಲಿಗೆ ಗಾಬರಿ!? ಎಂದರೆ ಹುಡುಗಿ ಏನಾದರೂ ಅಚಾತುರ್ಯದಿಂದ ಗರ್ಭಧರಿಸಿರಬಹುದೇ? ಎನ್ನುವ ಸಂಶಯ. ಆಗಿನ್ನು ಅಲ್ಟ್ರಾಸೌಂಡ್ ಸ್ಕ್ಯಾನಿಂಗ್ ಪದ್ಧತಿ ಪ್ರಾರಂಭವಾಗಿರಲಿಲ್ಲ. ಗರ್ಭಿಣಿಯಾದರೆ ಎಕ್ಸರೇ ಮಾಡಬಾರದು. ಹಾಗಾಗಿ ಮೂತ್ರ ಪರೀಕ್ಷೆ (ಪ್ರೆಗ್ನೆನ್ಸಿ ಟೆಸ್ಟ್) ಮಾಡಿಸಿಕೊಂಡು ಬರುವಂತೆ ಸೂಚಿಸಿದೆ. (ಮೂತ್ರದಲ್ಲಿ, ಗರ್ಭಿಣಿಯ ಪ್ಲೆಸೆಂಟಾದಲ್ಲಿ ತಯಾರಾಗುವ H.G.C. ಹ್ಯೂಮನ್ ಕೋರಿಯೋನಿಕ್ ಗೊನಾಡೊಟ್ರೋಫಿನ್‌ಅನ್ನು ಚೆಕ್ ಮಾಡುವುದು.)

ಮಾರನೆಯ ದಿನವೇ ದೇವರಾಜರು ರಿಪೋರ್ಟ್‌ನೊಂದಿಗೆ ಬಂದಿದ್ದರು. ರಿಪೋರ್ಟ್ ನೋಡಿ ನನ್ನ ಊಹೆ ನಿಜವಾಗಿದೆ ಅಂತ ಬೆರಗಾದೆ. ಅದರಲ್ಲಿ ಪ್ರೆಗ್ನೆನ್ಸಿ ಪೊಸಿಟಿವ್ ಎಂದು ತೋರಿಸಿತ್ತು. ದೇವರಾಜರಿಗೆ ರಿಪೋರ್ಟಿನ ವಿಚಾರ ಸೂಕ್ಷ್ಮವಾಗಿ ವಿವರಿಸಿ, ಹುಡುಗಿಯ ನಡವಳಿಕೆಯ ಬಗ್ಗೆ ವಿಚಾರಿಸಿದೆ. 'ಅವಳು ಸ್ಕೂಲು, ಮನೆ ಬಿಟ್ಟು ಬೇರೆಲ್ಲಾದರೂ ಹೋಗುತ್ತಾಳೆಯೇ? ಎಂದು. ಆದರೆ ಹುಡುಗಿ ತುಂಬಾ ಅಮಾಯಕಳಂತೆ ಕಾಣುತ್ತಿದ್ದಳು. ಗಾಬರಿಯಾದ ತಂದೆ, "ಸರ್ ಸ್ಕೂಲ್ ಬಿಟ್ಟರೆ ಆಕೆ ಟ್ಯೂಷನ್‌ಗೆ ಹೋಗುತ್ತಾಳೆ. ಆದರೆ ಆ ಟೀಚರ್ ಕೂಡ ನಮಗೆ ತುಂಬಾ ಬೇಕಾದವರು ಬಹಳ ಒಳ್ಳೆಯ ಜನ" ಎಂದರು. ಸರಿ ಹುಡುಗಿಯನ್ನು ಇನ್ನೊಮ್ಮೆ ಪರೀಕ್ಷಿಸಿ ಹೊಟ್ಟೆಯಲ್ಲಿ ಮಗುವಿನ ಎದೆ ಬಡಿತ ಏನಾದರೂ ಕೇಳಬಹುದೇ? ಎಂದು ಆಲಿಸಿದೆ. ಅಂತಹ ಯಾವ ಸೂಚನೆಯೂ ಕಾಣಿಸಲಿಲ್ಲ. ಮಗುವೇನಾದರೂ ಹೊಟ್ಟೆಯಲ್ಲಿ ತೀರಿ ಹೋಗಿರಬಹುದೆ? ಇತ್ಯಾದಿ ಸಹಜ ಯೋಚನೆ, ಸಂದೇಹ ಕಾಡತೊಡಗಿತ್ತು. ಹಾಗೇನಾದರೂ ಆದಲ್ಲಿ ಹುಡುಗಿಯ ಪ್ರಾಣಕ್ಕೇ ಅಪಾಯ. ಅಥವಾ ಗರ್ಭಕೋಶದ ಗೆಡ್ಡೆ ಇರಬಹುದೇ! ಎಂಬ ಸಂಶಯ ಇನ್ನೊಂದೆಡೆ. ಹೇಗೂ ಇರಲಿ ಇವಳನ್ನು ಆಸ್ಪತ್ರೆಗೆ ಕಳುಹಿಸುವುದೇ ಸೂಕ್ತ ಎಂದೆನಿಸಿ, ವಾಣಿವಿಲಾಸಕ್ಕೆ ರೆಫರೆನ್ಸ್ ಲೆಟರ್ ಕೊಟ್ಟು ಕಳುಹಿಸಿದೆ. ಅಲ್ಟ್ರಾ ಸೌಂಡ್ ಸ್ಕ್ಯಾನಿಂಗ್ ಸೌಲಭ್ಯ ದೊರೆತಿದ್ದಲ್ಲಿ ಈ ತಾಪತ್ರಯವೆಲ್ಲ ಇರುತ್ತಿರಲಿಲ್ಲ.

ಎರಡು ದಿನಗಳಲ್ಲಿ ದೇವರಾಜರು ಕ್ಲಿನಿಕ್‌ಗೆ ಬಂದರು. ಅವರು ನಿರಾಳರಾಗಿ ಸಂತೋಷಚಿತ್ತರಾಗಿದ್ದನ್ನು ನೋಡಿದೆ. ಏನೊಂದೂ ಅನಾಹುತ ಆಗಿರಲಿಕ್ಕಿಲ್ಲ ಎನ್ನುವುದು ಅವರ ಪ್ರಸನ್ನ ವದನವೇ ಸಾರುತ್ತಿತ್ತು. ನನ್ನನ್ನು ವಂದಿಸುತ್ತಾ, "ಡಾಕ್ಟರ್, ಮೂತ್ರ ರಿಪೋರ್ಟಿನಂತೆ ಬೇರೇನು ಪ್ರಮಾದ ಆಗಿರಲಿಲ್ಲವಂತೆ, ಗರ್ಭಕೋಶದ ದ್ವಾರ ಮುಚ್ಚಿದೆಯಂತೆ. ಅವಳು ಮೂರು ನಾಲ್ಕು ತಿಂಗಳ ಹಿಂದೇನೇ ಋತುಮತಿಯಾಗಿದ್ದಳಂತೆ. ಮುಟ್ಟಿನ ರಕ್ತವೆಲ್ಲ ಅಲ್ಲಿಯೇ ತುಂಬಿಕೊಂಡು ಗರ್ಭಕೋಶ ದೊಡ್ಡದಾಗಿದೆಯಂತೆ. ದ್ವಾರ ಬಿಡಿಸಿ,

ಮಲಿನ ರಕ್ತವೆಲ್ಲಾ ತೆಗೆದು ಕ್ಲೀನ್ ಮಾಡಿ ಕಳುಹಿಸಿದರು. ನೀವು ವಾಣಿವಿಲಾಸಕ್ಕೆ ಕಳುಹಿಸಿ ತುಂಬಾ ಉಪಕಾರ ಮಾಡಿದಿರಿ. ಮೂತ್ರದ ರಿಪೋರ್ಟ್ ತಿಳಿದು, ನನ್ನ ತಲೆ ಮೇಲೆ ದೊಡ್ಡ ಬಂಡೆ ಬಿದ್ದ ಹಾಗಾಗಿತ್ತು" ಎಂದು ತಮ್ಮ ಮನದಾಳದ ಸಂಕಟ, ಸಂತೋಷಗಳನ್ನೆಲ್ಲ ತೋಡಿಕೊಂಡರು.

ಇಲ್ಲಿ ಸ್ತ್ರೀ ಸಹಜ ಸೃಷ್ಟಿಕ್ರಿಯೆಯ ಬಗ್ಗೆ ತಿಳಿದುಕೊಳ್ಳೋಣ. ಹೆಣ್ಣು ಮಕ್ಕಳಲ್ಲಿ ಸುಮಾರು ಹನ್ನೊಂದು ಹನ್ನೆರಡನೆಯ ವಯಸ್ಸಿನಲ್ಲಿ ಮುಟ್ಟಿನ ಕ್ರಿಯೆ ಆರಂಭವಾಗುತ್ತದೆ. ಗರ್ಭಕೋಶದ ಒಳಪದರ ತಿಂಗಳಿಗೊಮ್ಮೆ ಕಳಚಿ ರಕ್ತದೊಂದಿಗೆ ಹೊರದೂಡಲ್ಪಟ್ಟು, ಗರ್ಭಕೋಶದ ದ್ವಾರದ ಮೂಲಕ ಹೊರಬರುತ್ತದೆ. ಈ ಕ್ರಿಯೆ ಸುಮಾರು ನಲವತ್ತೈದರಿಂದ ಐವತ್ತು ವರ್ಷಗಳ ತನಕ ನಡೆಯುತ್ತದೆ. ಸೀತಾಳಲ್ಲಿ ಆಕೆಯ ಯೋನಿಯ ದ್ವಾರದ ಕನ್ಯಾಪೊರೆ (ಹೈಮನ್)ಪೂರ್ಣವಾಗಿ ಮುಚ್ಚಿತ್ತು. ಹಾಗಾಗಿ ರಕ್ತ ಒಳಗೆ ಸೇರಿಕೊಂಡು ಗರ್ಭಕೋಶ ದೊಡ್ಡದಾಗಿತ್ತು.

ಲ್ಯಾಬೋರೇಟರಿಯವರ 'ಪ್ರೆಗ್ನೆನ್ಸಿ ಪಾಸಿಟಿವ್' ಎಂಬ ತಪ್ಪು ರಿಪೋರ್ಟ್-ನಿಂದಾಗಿ ನಾವೆಲ್ಲ ಹುಡುಗಿಯ ಶೀಲವನ್ನೇ ಶಂಕಿಸುವಂತಾಯ್ತಲ್ಲ ಎಂದು ಬಹಳ ವಿಷಾದವಾಯಿತು.

ಇಂತಹುದೇ ಇನ್ನೊಂದು ಪ್ರಕರಣ 1989- 90ರಲ್ಲಿ ನಡೆದ ನೆನಪು.

ನಮ್ಮ ಮನೆ ಸಮೀಪ ವಾಸವಾಗಿದ್ದ ಯಶೋಧಾರವರ ಕಥೆ. ಅವರ ಪತಿ ಒಂದು ಚಿಕ್ಕ ಅಂಗಡಿ ನಡೆಸುತ್ತಿದ್ದರು. ಒಂದು ದಿನ ಅವರ ಮಗಳು, ಯಶೋದಮ್ಮನವರನ್ನು ನನ್ನ ಮನೆಗೆ ಕರೆತಂದಿದ್ದಳು. ಅವರು ಎರಡು ಮೂರು ದಿನಗಳಿಂದ ಜ್ವರ ಹಾಗೂ ಹೊಟ್ಟೆಯ ಬಲಭಾಗದಲ್ಲಿ ಲಿವರ್ ಇರುವ ಜಾಗದಲ್ಲಿ ನೋವಿನಿಂದ ಬಳಲುತ್ತಿದ್ದರು. ಪರೀಕ್ಷಿಸಿದರೆ, ಅಂತಹ ಜ್ವರವೇನು ಇರಲಿಲ್ಲ, ಹಾಗೂ ಪಿತ್ತಚೀಲ (ಗಾಲ್ ಬ್ಲಾಡರ್) ಇರುವ ಭಾಗದಲ್ಲಿ ಒತ್ತಿದರೆ ನೋವು ಬರುವುದಾಗಿ ತಿಳಿಸಿದರು. ಐವತ್ತು ಐವತ್ತೈದರ ಆಸುಪಾಸಿನಲ್ಲಿದ್ದ ಆಕೆ ಸ್ಥೂಲಕಾಯಿಯಾಗಿ ಡಯಾಬಿಟಿಸ್ ರೋಗಿಯಾಗಿದ್ದರು. ಹಾಗೆ ಕಣ್ಣು ಪರೀಕ್ಷಿಸಿದಾಗ, ಸ್ವಲ್ಪ ಕಾಮಾಲೆ ಇರುವುದಾಗಿ ಕಾಣಿಸಿತು. ನನ್ನ ಪ್ರಥಮ ಡಯಾಗ್ನೋಸಿಸ್, ಪಿತ್ತಚೀಲದಲ್ಲಿ ಕಲ್ಲಿದ್ದು, ಪಿತ್ತನಾಳಗಳು ಬ್ಲಾಕ್ ಆಗಿ, ಪಿತ್ತಚೀಲದ ಇನ್ಫೆಕ್ಷನ್ ಆಗಿದೆ. ಇನ್ನೊಂದು ಅವರ ಪಿತ್ತಕೋಶದ ವೈರಲ್ ಇನ್ಫೆಕ್ಷನ್ ಎಂಬುದಾಗಿತ್ತು.

ಮಗಳಿಗೆ ಅವರ ಲಿವರ್ ಫಂಕ್ಷನ್ ಟೆಸ್ಟ್(L.F.T), ಮೂತ್ರದಲ್ಲಿನ ಕಾಮಾಲೆ ಪರೀಕ್ಷೆ ಹಾಗೂ ಹೊಟ್ಟೆಯ ಅಲ್ಟ್ರಾ ಸೌಂಡ್ ಟೆಸ್ಟ್ ಗೆ ಸಲಹೆ ಮಾಡಿದೆ.

"ಇಲ್ಲ ಡಾಕ್ಟ್ರೇ, ನಾವು ಹೇಗೂ ಆಸ್ಪತ್ರೆಗೆ ಹೋಗುತ್ತಿವಲ್ಲ, ಅಲ್ಲಿಯೇ ಎಲ್ಲಾ ಪರೀಕ್ಷೆಗಳನ್ನು ಮಾಡಿಸುತ್ತೇವೆ" ಎಂದಳು. ಸರಿ ಎಂದು ಕೆಂಪೇಗೌಡ

ರಸ್ತೆಯಲ್ಲಿರುವ ಒಂದು ಪ್ರತಿಷ್ಠಿತ ಆಸ್ಪತ್ರೆಗೆ ರೆಫರೆನ್ಸ್ ಲೆಟರ್ ಬರೆದು ಕಳುಹಿಸಿದೆ.

ಆವಾಗಲೂ ಅಲ್ಟ್ರಾ ಸೌಂಡ್ ಇಮೇಜಿಂಗ್ ಸೆಂಟರ್ ಕೆಲವೊಂದು ಕಡೆ ಮಾತ್ರ ಲಭ್ಯವಿತ್ತು.

ಇದಾಗಿ ಹತ್ತು ದಿನಗಳ ಬಳಿಕ ಯಶೋದಮ್ಮನವರ ಹಿರಿಯ ಮಗ, ರಿಪೋರ್ಟ್ ತೆಗೆದುಕೊಂಡು ನಮ್ಮ ಮನೆಗೆ ಬಂದಿದ್ದ.

"ಡಾಕ್ಟ್ರೇ, ಅದು ಮೇಧೋಜೀರಕ ಗ್ರಂಥಿಯ ಕ್ಯಾನ್ಸರ್ ಅಂತೆ, ಬಹಳ ಗಂಭೀರ ಕಾಯಿಲೆಯಂತೆ. ಈ ವಿಚಾರ ತಾಯಿಗೆ ತಿಳಿಯುವುದು ಬೇಡ. ಈ ಕ್ಯಾನ್ಸರ್ ಬಹಳ ಬೇಗನೆ ಉಲ್ಬಣಿಸುವುದರಿಂದ ನಮ್ಮ ತಾಯಿ ಬಹಳ ದಿನ ಬದುಕುಳಿಯಲಾರರು ಎಂದರು" ಹಾಗೆ ಬಹಳ ದುಃಖದಿಂದ ತಿಳಿಸಿ ರಿಪೋರ್ಟ್ ಕೈಗಿಟ್ಟ. ರಿಪೋರ್ಟ್ ಓದಲಾರಂಭಿಸಿದೆ. ಅದರಂತೆ ಆಕೆಗೆ ಪ್ಯಾಂಕ್ರಿಯಾಸಿಸ್‌ನ ತಲೆಯಲ್ಲಿ ಕ್ಯಾನ್ಸರ್ ಕಾಣಿಸಿಕೊಂಡು, ಇದರಿಂದ ಪಿತ್ತನಾಳ ಒತ್ತಲ್ಪಟ್ಟು, ಕಾಮಾಲೆ ಪ್ರಾರಂಭವಾಗಿದೆ. ಮೆಧೋಜೀರಕ ಗ್ರಂಥಿಯ ಕ್ಯಾನ್ಸರ್ ಬಹುಬೇಗ ಉಲ್ಬಣಿಸಿ ಹರಡುವುದರಿಂದ, ಆಕೆಯ ಭವಿಷ್ಯ ಕರಾಳವಾಗಿದೆ ಅನ್ನಿಸಿತು. ರಿಪೋರ್ಟನ್ನು ನಂಬಿದ ನಾನು, "ನೀವೊಮ್ಮೆ ಸರ್ಕಾರಿ ಆಸ್ಪತ್ರೆ ಕಿದ್ವಾಯಿಗೆ ಹೋಗಿ ಬರಬಾರದೇಕೆ? ಎರಡನೆ ಅಭಿಪ್ರಾಯ ಪಡೆಯಬಹುದಲ್ವಾ?" ಎಂದೆ.

"ಇಲ್ಲ ಡಾಕ್ಟ್ರೇ, ಏನೂ ಉಪಯೋಗ ಇಲ್ಲ ಎಂದಮೇಲೆ ಅವರಿಗೆ ಯಾಕೆ ಹಿಂಸೆ ಕೊಡುವುದು? ಇರುವಷ್ಟು ದಿನ ಹೀಗೆ ಏನೂ ವಿಷಯ ತಿಳಿಯದೆ ಇರಲಿ" ಎನ್ನುವ ಅಭಿಪ್ರಾಯ ಪಟ್ಟ.

ವಿಷಯ ನನಗೆ ತಿಳಿಸಿ ಹೋಗಲೆಂದೇ ಬಂದಿದ್ದ.

ಇದಾಗಿ ಆರು ತಿಂಗಳು ಕಳೆದಿರಬಹುದು. ಒಂದು ಬೆಳಗಿನ ವಾಕಿಂಗ್ ವೇಳೆ ಯಶೋದಮ್ಮನ ಭೇಟಿಯಾಯಿತು. 'ಚೆನ್ನಾಗಿದ್ದೀರಾ'? ಎನ್ನುವ ಪ್ರಶ್ನೆಗೆ, "ಇಷ್ಟರ ಮಟ್ಟಿಗೆ ಇದ್ದೇನೆ. ನಿಮಗೆ ಶುಗರ್ ರಿಪೋರ್ಟ್ ತೋರಿಸಬೇಕಾಗಿತ್ತು." ಎಂದರು. "ಸರಿ ಮಗನ ಹತ್ತಿರ ಕಳುಹಿಸಿ" ಎಂದೆ. ಆಶ್ಚರ್ಯ ಎಂದರೆ, ಯಶೋದಮ್ಮ ನೋಡಲು ಕ್ಯಾನ್ಸರ್ ರೋಗಿಯಂತೆ ನನಗೆ ಕಾಣಿಸಲಿಲ್ಲ. ಅರೆ! ಚೆನ್ನಾಗಿಯೇ ಇದ್ದಾರಲ್ಲ? ಎನ್ನಿಸಿತು. ಅಥವಾ ಬೇರೆ ಏನಾದರೂ ಚಿಕಿತ್ಸೆ ಪಡೆಯುತ್ತಿದ್ದಾರೇನೊ ಎಂದುಕೊಂಡೆ.

ಹಾಗೆ ವರ್ಷಗಳೇ ಕಳೆದಿರಬಹುದು. ಬೇರೇನೊ ಸಮಸ್ಯೆಯಿಂದ ಯಶೋದಮ್ಮ ನನ್ನಲ್ಲಿಗೆ ಬಂದರು. ಅವರನ್ನು ನೋಡಿ ನನಗೆ ಆಶ್ಚರ್ಯದ ಜೊತೆಗೆ ಜ್ಞಾನೋದಯವೇ ಆಗಿತ್ತು. ಅವರ ಕ್ಯಾನ್ಸರ್ ರಿಪೋರ್ಟ್ ತಪ್ಪಾಗಿದ್ದಿರಬೇಕು. ಮೆಧೋಜೀರಕ ಗ್ರಂಥಿಯ ಕ್ಯಾನ್ಸರ್ ಆಗಿದ್ದಿದ್ದರೆ, ಯಶೋದಮ್ಮ ಇಷ್ಟು ಸಮಯ ಖಂಡಿತವಾಗಿಯೂ ಬದುಕಿರುತ್ತಿರಲಿಲ್ಲ. ಇನ್ನೊಮ್ಮೆ ಅವರ ಮಗ ಬಂದಾಗ ಈ ವಿಷಯ ಪ್ರಸ್ತಾಪಿಸಿ, 'ಇನ್ನೊಮ್ಮೆ

ಅಲ್ಟ್ರಾಸೌಂಡ್ ಸ್ಕ್ಯಾನಿಂಗ್ ಪರೀಕ್ಷೆ ಮಾಡುವಂತೆ' ತಿಳಿಸಿದೆ.

"ಏಕೆ ಡಾಕ್ಟ್ರೇ? ನಮ್ಮ ಅಮ್ಮ ಚೆನ್ನಾಗಿಯೇ ಇದ್ದಾರೆ. ಏನೋ ಬಿಡಿ ದೇವರು ದೊಡ್ಡವನು, ನಮ್ಮ ತಾಯಿ ಅದೃಷ್ಟಶಾಲಿ ಹಾಗೆಯೇ ನಾವೂ ಅದೃಷ್ಟವಂತರು" ಎನ್ನುವುದೇ!? ಇಲ್ಲಿ ಪ್ರತಿಷ್ಠಿತ ಆಸ್ಪತ್ರೆ ಡಾಕ್ಟರ್‌ಗಳ ಅಲ್ಟ್ರಾ ಸೌಂಡ್ ಸ್ಕ್ಯಾನಿಂಗ್ ರಿಪೋರ್ಟ್ ನಂಬಿ ನಾನು ಮೋಸ ಹೋಗಿದ್ದೆ.

ಹೀಗೆ ಇನ್ನೊಂದು ನಮ್ಮ ಕೇಶವನ್ ವಿಚಾರ. ಈ ಘಟನೆ 2007ರಲ್ಲಿ ನಡೆದ ನೆನಪು. ನಲವತ್ತು ನಲವತ್ತೈದು ವಯಸ್ಸಿನ ಕೇಶವನ್ ಸೆಕ್ಯೂರಿಟಿ ಗಾರ್ಡ್ ಆಗಿ ಕೆಲಸ ಮಾಡುತ್ತಿದ್ದ. ಬಿ.ಪಿ., ಸಿಹಿಮೂತ್ರ ರೋಗದಿಂದ ಬಳಲುತ್ತಿದ್ದ ಅವನು ನನ್ನ ಖಾಯಂ ಪೇಷಂಟ್ ಆಗಿದ್ದ. ಇದರೊಂದಿಗೆ ಆತನಿಗೆ ಮೂಲವ್ಯಾಧಿ ಸಮಸ್ಯೆಯೂ ಸೇರಿಕೊಂಡಿತ್ತು. ನಿಯಮಿತವಾಗಿ, ಬಿ.ಪಿ., ಡಯಾಬಿಟಿಸ್ ಚೆಕಪ್‌ಗೆ ಬರುತ್ತಿದ್ದ ಆತನಿಗೆ ಮೂಲವ್ಯಾಧಿಗೆ ಶಸ್ತ್ರಚಿಕಿತ್ಸೆಯ ಅಗತ್ಯವಿದೆ ಎನ್ನುವ ಸಲಹೆ ನೀಡಿದ್ದೆ. ಆತನ ಬಿ.ಪಿ, ಸಿಹಿಮೂತ್ರ ಕಂಟ್ರೋಲ್ ಇರುವುದನ್ನು ಖಚಿತಪಡಿಸಿಕೊಂಡು, ಆ ಸಮಯದಲ್ಲಿ ಶಸ್ತ್ರಚಿಕಿತ್ಸೆಗೆ ನನ್ನ ಸ್ನೇಹಿತ ಸರ್ಜನರಿಗೆ, ರೆಫರೆನ್ಸ್ ಲೆಟರ್ ಬರೆದು ಕಳುಹಿಸಿದೆ.

ಸರ್ಜನರು ಬೆರಳಿನಿಂದ ಮೂಲವ್ಯಾಧಿಯನ್ನು ಖಚಿತಪಡಿಸಿಕೊಂಡು ಹಾಗೆ ಅಲ್ಲಿಂದ ಮೇಲ್ಗಡೆ ಒಂದು ಅಲ್ಸರ್ ಇರುವುದಾಗಿ ಪತ್ತೆ ಹಚ್ಚಿದ್ದರು. ಹಾಗೆ ಶಸ್ತ್ರಚಿಕಿತ್ಸೆಗೂ ಮೊದಲು ಒಮ್ಮೆ ಕೊಲೊನೋಸ್ಕೋಪಿ ಮಾಡಿ ನೋಡುವುದರ ಅವಶ್ಯಕತೆ ಬಗ್ಗೆ ತಿಳಿಸಿದ್ದರು. ಕೊಲೊನೋಸ್ಕೋಪಿ ಎಂದರೆ, ಮಲದ್ವಾರದ ಮೂಲಕ ಎಂಡೋಸ್ಕೋಪಿ ಎಂಬ ಉಪಕರಣ ಹಾಕಿ, ಮಲದ್ವಾರದಿಂದ ರೆಕ್ಟಂ, ದೊಡ್ಡ ಕರುಳು, ಸಣ್ಣ ಕರುಳಿನ ಜಂಕ್ಷನ್‌ವರೆಗೆ ಎಂಡೋಸ್ಕೋಪಿ ಕ್ಯಾಮೆರಾದ ಮೂಲಕ ಟಿವಿ ಸ್ಕ್ರೀನ್ ನಲ್ಲಿ ನೋಡುವುದು. ಅಕಸ್ಮಾತ್ ಅಲ್ಸರ್ ಅಥವಾ ಗಡ್ಡೆಗಳೇನಾದರೂ ಇದ್ದರೆ, ಪರೀಕ್ಷೆಗೆ ಒಂದು ತುಂಡನ್ನು ಕತ್ತರಿಸಿ ತೆಗೆದು, ಆ ತುಣುಕನ್ನು ಹಿಸ್ಟೋಪೆಥಾಲಜಿ ಪರೀಕ್ಷೆಗೆ ಅಂದರೆ ಸ್ಲೈಡ್ ಮಾಡಿ, ಮೈಕ್ರೋಸ್ಕೋಪ್ ಮೂಲಕ ಸ್ಟಡಿ ಮಾಡಿ, ರೋಗದ ಬಗ್ಗೆ ತಿಳಿಯುವುದು. ಸರಿ ಕೇಶವನನ್ನು ಕೊಲೊನೋಸ್ಕೋಪಿಗೆ ಕಳುಹಿಸಿದೆ.

ಎರಡು ದಿನಗಳಲ್ಲಿ ಕೊಲೊನೋಸ್ಕೋಪಿ ಹಾಗೂ ಹಿಸ್ಟೋಪೆಥಾಲಜಿ ರಿಪೋರ್ಟ್‌ನೊಂದಿಗೆ ಕೇಶವನ್ ನನ್ನಲ್ಲಿಗೆ ಬಂದಿದ್ದ. ರಿಪೋರ್ಟ್ ಪ್ರಕಾರ ಆತನಿಗೆ ಮೂಲವ್ಯಾಧಿ ಹಾಗೂ ಮೂಲವ್ಯಾಧಿಯ ಮೇಲ್ಗಡೆ, ರೆಕ್ಟಂನಲ್ಲಿ ಒಂದು ಅಲ್ಸರ್ ಇದೆ. ಅದರಿಂದಲೇ ರಕ್ತ ಜಿನುಗುವುದು. ಹಾಗೆ ಅಲ್ಸರ್‌ನ ತುಣುಕನ್ನು ಹಿಸ್ಟೋಪೆಥಾಲಜಿಗೆ ಕಳುಹಿಸಿದ್ದರು. ಪೆಥಾಲಜಿಸ್ಟ್ ರಿಪೋರ್ಟ್ ನೋಡಿ ದಂಗಾದೆ!. ಅದರ ಪ್ರಕಾರ, ಆ ಅಲ್ಸರ್, ಕ್ಯಾನ್ಸರ್ ಹುಣ್ಣಾಗಿತ್ತು. ಪೆಥಾಲಜಿಸ್ಟ್ ವಿವರವಾಗಿ ಕ್ಯಾನ್ಸರ್ ಸೆಲ್‌ಗಳನ್ನು ವಿವರಿಸಿ, ಇದು ಕೊಲನ್ ಕ್ಯಾನ್ಸರ್ ಎಂದು

ಷರಾ ಬರೆದಿದ್ದರು. ಈ ವಿಚಾರ ಪೇಷಂಟಿಗೆ ಆಘಾತವಾಗದಂತೆ ತಿಳಿಸಬೇಕಲ್ಲ?

ನಾನು ಶಾಂತ ಚಿತ್ತದಿಂದ ಕೇಶವನ್‌ಗೆ ಕಾಯಿಲೆಯ ಬಗ್ಗೆ ವಿವರಿಸಿ, ಸರ್ಕಾರಿ ಸ್ವಾಮ್ಯದ ಕಿದ್ವಾಯಿ ಕ್ಯಾನ್ಸರ್ ಆಸ್ಪತ್ರೆಗೆ ಹೋಗುವ ಸಲಹೆ ನೀಡಿದೆ. ವಿಷಯ ತಿಳಿದು ಆತನ ಮುಖ ಪೇಲವವಾಯಿತಾದರೂ ಸಾವರಿಸಿಕೊಂಡು,

"ನನಗೆ ಕ್ಯಾನ್ಸರ್ ಜಾಸ್ತಿ ಆಗಿದೆಯಾ? ಈವಾಗ ಔಷಧ ಕಂಡು ಹಿಡಿದಿದ್ದಾರಂತಲ್ಲ? ಅದೇನೊ ಕ್ಯಾನ್ಸರ್‌ನಲ್ಲಿ, 1ನೇ ಸ್ಟೇಜ್, 2ನೇ, 3ನೇ ಸ್ಟೇಜ್  ಅಂತಾರಲ್ಲ, ನನ್ನದು ಯಾವ ಸ್ಟೇಜ್ ನಲ್ಲಿದೆ?" ಎಂದು ಆತನ ತಿಳುವಳಿಕೆಗನುಗುಣವಾಗಿ ಪ್ರಶ್ನಿಸಿದ.

ನನಗೆ ಕೋಲನ್ ಕ್ಯಾನ್ಸರ್ ಬಗ್ಗೆ ಅಷ್ಟೇನೂ ಮಾಹಿತಿ ತಿಳಿದಿರಲಿಲ್ಲ.  ಹೆಚ್ಚಿನ ಸಂದರ್ಭಗಳಲ್ಲಿ ನಾನು, (ನನ್ನಂತಹ ಅನೇಕ ಡಾಕ್ಟರ್‌ಗಳು) ಕ್ಯಾನ್ಸರ್ ಎಂದು ತಿಳಿದಾಕ್ಷಣ ಮುಂದಿನ ಚಿಕಿತ್ಸೆಗೆ ಕಿದ್ವಾಯಿ ಅಥವಾ ಬೇರೆ ಯಾವುದಾದರೂ ಕ್ಯಾನ್ಸರ್ ಆಸ್ಪತ್ರೆಗಳನ್ನು ರೆಫರ್ ಮಾಡುತ್ತೇವೆ. ಆದರೂ ಕೇಶವನ್‌ಗೆ ಧೈರ್ಯ ತುಂಬಲು, "ನೀನೇನು ಚಿಂತಿಸಬೇಕಾಗಿಲ್ಲ, ನಿನ್ನ ಕ್ಯಾನ್ಸರ್ ಇನ್ನೂ ಆರಂಭದ ಸ್ಥಿತಿಯಲ್ಲಿದೆ ಹಾಗೂ ಉತ್ತಮ ಔಷಧಗಳು, ರೇಡಿಯೋಥೆರಪಿ ಮುಂತಾದ ಸೌಲಭ್ಯಗಳಿವೆ" ಎಂದು ಭರವಸೆ ನೀಡಿದೆ. ಇನ್ನೆರಡು ದಿನಗಳಲ್ಲಿ ನಾನು ನನ್ನ ಪತ್ನಿಯೊಂದಿಗೆ ಹಾಲೆಂಡ್‌ಗೆ ಹೋಗುವವನಿದ್ದೆ. ನೆದರಲ್ಯಾಂಡ್‌ನ ಆಮ್‌ಸ್ಟರ್ಡ್ಯಾಮ್‌ನಲ್ಲಿ ನನ್ನ ಇಂಜಿನಿಯರ್ ಮಗ ವಾಸವಾಗಿದ್ದ. ಅವರಿಗೆ ಮಗುವಾದ ಕಾರಣ, ಮೊಮ್ಮಗನನ್ನು ನೋಡಲು, ಹಾಗೆ ಒಂದೆರಡು ತಿಂಗಳು ಅವರೊಂದಿಗೆ ಇರುವುದಾಗಿ ತೀರ್ಮಾನಿಸಿ, ವೀಸಾ ತಯಾರಿ ಎಲ್ಲ ನಡೆದಿತ್ತು. ಹಾಗಾಗಿ ಕೂಡಲೇ ಕಿದ್ವಾಯಿಗೆ ಹೋಗಿ ವಿಚಾರಿಸಿ ತಿಳಿಸುವಂತೆ ಕೇಶವನ್‌ಗೆ ತಿಳಿಸಿದೆ.  ನಾನು ರಜಾ ಇರುವ ವಿಚಾರ ಕೇಳಿ ಆತ ತುಂಬಾ ಗಲಿಬಿಲಿಗೊಂಡ. ಹಾಗೆ ನನ್ನ ಆಮ್ಸ್ಟರ್‌ಡ್ಯಾಂನ ಫೋನ್ ನಂಬರನ್ನು ಕೇಳಿ ಪಡೆದುಕೊಂಡು ಹೊರಟು ಹೋದ.

ಇದಾಗಿ ಎರಡು ದಿನಗಳಲ್ಲಿ ನಾನು ನೆದರ್‌ಲ್ಯಾಂಡಿನಲ್ಲಿದ್ದೆ. ಕೆಲವು ದಿನಗಳ ನಂತರ, ಮಗನ ಮನೆಯಲ್ಲಿದ್ದ ನನಗೆ, ಕೇಶವನ್‌ನಿಂದ ಫೋನ್ ಬಂದಿತ್ತು.  "ಕಿದ್ವಾಯಿಗೆ ಹೋದೆಯಾ? ಏನಾಯಿತು? ಎಂದು ವಿಚಾರಿಸಿದೆ. ಆತ, "ಡಾಕ್ಟರ್ ನಾನಿನ್ನೂ ಕಿದ್ವಾಯಿಗೆ ಹೋಗಿಯೇ ಇಲ್ಲ. ನಾನು ಚೆನ್ನಾಗೇ ಇದ್ದೀನಿ. ನೀವು ಊರಿಗೆ ವಾಪಸ್ ಆದ ನಂತರವೇ ಹೋಗೋಣ ಅಂತಿದ್ದೀನಿ ಎಂದ. ನನಗೊ ಆಶ್ಚರ್ಯ! ಛೆ. ಹಾಗೆ ಆತ ಮುಂದುವರಿಸಿ,

"ನೀವು ಅಲ್ಲಿಗೆ ಹೋದ ಮೇಲೆ ನನಗೆ ಇನ್ನೊಂದು ಸಮಸ್ಯೆ ಪ್ರಾರಂಭವಾಯಿತು. ಈ ಚಿಂತೆಯಲ್ಲಿ ನನಗೆ ನಿದ್ರೇನೇ ಬರ್ತಾ ಇರಲಿಲ್ಲ. ಹಾಗಾಗಿ ಮನೆಯವರು ನನ್ನನ್ನು ಮನೋವೈದ್ಯರಲ್ಲಿ ಕರೆದುಕೊಂಡು

ಹೋದರು. ಅವರು, ನಿನಗೆ ಕ್ಯಾನ್ಸರ್ ಬಗೆಗಿನ ವಿಪರೀತ ಚಿಂತೆಯಿಂದಾಗಿ ನಿದ್ದೆ ಬರ್ತಾ ಇಲ್ಲ ಎಂದು ಮಾತ್ರ ಬರೆದು ಕೊಟ್ಟರು. ಅದರಿಂದಾಗಿ ಈವಾಗ ತುಂಬಾ ಸುಧಾರಣೆಯಾಗಿದೆ. ನೀವು ವಾಪಾಸ್ ಆದನಂತರವೇ ಕಿದ್ವಾಯಿಗೆ ಹೋಗುವುದಾಗಿ ತೀರ್ಮಾನಿಸಿದ್ದೇನೆ" ಎಂದ. 'ಏನಪ್ಪಾ ಈತನ ಹಣೆಬರಹ!?' ಎಂದುಕೊಂಡು ಸುಮ್ಮನಾಗಬೇಕಾಯಿತು.

ಸರಿ, ಎರಡು ತಿಂಗಳ ನಂತರ ನಾನು ಬೆಂಗಳೂರಿಗೆ ವಾಪಸಾಗಿ ಕ್ಲಿನಿಕ್ ತೆರೆದ ಪ್ರಥಮ ದಿನವೇ ಕೇಶವನ್ ಕ್ಲಿನಿಕ್ ನಲ್ಲಿ ಹಾಜರಾಗಿದ್ದ. ನನ್ನ ಬರುವಿಕೆಗಾಗಿ ಚಾತಕ ಪಕ್ಷಿಯಂತೆ ಕಾಯುತ್ತಿದ್ದ. ಹಾಗೆ ನಾಳೆನೇ ಕಿದ್ವಾಯಿಗೆ ಹೋಗುವುದಾಗಿ ತಿಳಿಸಿದ. ಆದರೆ ಆತನಲ್ಲಿ ಈ ಎರಡು ತಿಂಗಳುಗಳಲ್ಲಿ ಯಾವುದೇ ದೈಹಿಕ ನ್ಯೂನತೆ, ಬದಲಾವಣೆ ಕಂಡುಬರಲಿಲ್ಲ. ಲ್ಯಾಬೊರೇಟರಿಯಲ್ಲಿ ಕೊಟ್ಟ ಹಿಸ್ಟೋಪೆಥಾಲಜಿ ರಿಪೋರ್ಟ್ ಹಾಗೂ ಸ್ಲೈಡ್‌ಗಳನ್ನು ಮರೆಯದೆ, ಕಿದ್ವಾಯಿಗೆ ಕೊಂಡೊಯ್ಯುವಂತೆ ಜ್ಞಾಪಿಸಿ ಕಳುಹಿಸಿದೆ.

ಎರಡು ದಿನಗಳಲ್ಲಿ ಕೇಶವನ್ ನನ್ನಲ್ಲಿಗೆ ಬಂದ.

"ಡಾಕ್ಟ್ರೇ, ಈ ಸ್ಲೈಡ್ ಪರೀಕ್ಷಿಸಿ, ಇನ್ನೊಂದು ರಿಪೋರ್ಟ್ ಕೊಟ್ಟಿದ್ದಾರೆ ಹಾಗೆ ಇನ್ನೊಂದು ಬಾರಿ, ಕೊಲೋನೋಸ್ಕೋಪಿ ಹಾಗೂ ಬಯಾಪ್ಸಿ ಮಾಡಿಸಲು ಸಲಹೆ ನೀಡಿದ್ದಾರೆ ಎನ್ನುತ್ತಾ ರಿಪೋರ್ಟ್ ನನ್ನ ಕೈಗಿತ್ತ.

ನಾನು ಕುತೂಹಲದಿಂದ ರಿಪೋರ್ಟ್ ನೋಡತೊಡಗಿದೆ. ಲ್ಯಾಬೋರೇಟರಿಯಲ್ಲಿ ತಯಾರಿಸಿದ ಸ್ಲೈಡ್ ಅನ್ನು ಪುನಃ ಮೈಕ್ರೋಸ್ಕೋಪ್ ನಲ್ಲಿ ಪರೀಕ್ಷಿಸಿ ಒಂದು ದೀರ್ಘ ರಿಪೋರ್ಟ್ ಕೊಟ್ಟಿದ್ದರು. ಪ್ರತಿಯೊಂದು ಹಿಸ್ಟೊಪೆಥಾಲಜಿಯನ್ನು ವಿವರವಾಗಿ ನಮೂದಿಸಿದ್ದರು. ಆ ಪ್ರಕಾರ ಅದು ಅಮೀಬಿಕ್ ಅಲ್ಸರ್. ನಿಖರವಾಗಿ ಕ್ಯಾನ್ಸರ್ ಬಗ್ಗೆ ತಿಳಿಯಲು, ಇನ್ನೊಂದು ಬಾರಿ ಕೊಲೊನೋಸ್ಕೋಪಿ ಹಾಗೂ ಬಯಾಪ್ಸಿಮಾಡಬೇಕೆಂದು ಒಂದು ದಿನಾಂಕ ನಿಗದಿ ಪಡಿಸಿದ್ದರು. ಹಾಗಿದ್ದರೆ ಕೇಶವನ್‌ನ ದೊಡ್ಡ ಕರುಳಿನ ತುದಿಯಲ್ಲಿರುವ ಅಲ್ಸರ್, ಕ್ಯಾನ್ಸರ್ ಅಲ್ಸರ್ ಆಗಿರದೆ, ಅಮೀಬಿಕ್ ಅಲ್ಸರ್ ಇರಬಹುದು ಎಂದು ನನಗೂ ಅನಿಸತೊಡಗಿತು.

ಕ್ಯಾನ್ಸರೇ ಆಗಿದ್ದಲ್ಲಿ, ಈ ಎರಡು ತಿಂಗಳಲ್ಲಿ ಇಷ್ಟೊಂದು ಆರೋಗ್ಯವಾಗಿರಲು ಸಾಧ್ಯವಿರಲಿಲ್ಲ. ಅಮೀಬಿಕ್ ಅಲ್ಸರ್, ಅಮೀಬಾ ಎನ್ನುವ ರೋಗಕಾರಕ ಏಕಾಣು ಜೀವಿಯಿಂದ ದೊಡ್ಡ ಕರುಳಲ್ಲಿ ಉಂಟಾಗುವ ಕಾಯಿಲೆ. ಇದನ್ನು ಸಂಪೂರ್ಣವಾಗಿ ಗುಣಪಡಿಸಲು ಸುಲಭ ಹಾಗೂ ಉತ್ತಮ ಚಿಕಿತ್ಸೆ ಇದೆ. ಕೇಶವನ್‌ಗೆ ಕೂಡಲೇ ಹತ್ತು ದಿನಗಳ ಮಾತ್ರೆ ಬರೆದು ಅದನ್ನು ಸೇವಿಸುವ ಕ್ರಮ ತಿಳಿಸಿ ಕಳುಹಿಸಿದೆ. ಆತ ಹತ್ತು ದಿನಗಳ ಬದಲು ಇಪ್ಪತ್ತು ದಿನಗಳ ಮಾತ್ರೆ ಕೋರ್ಸ್ ಮುಗಿಸಿ, ನನ್ನ ಹತ್ತಿರ ಬಂದಿದ್ದ. ಅವನ ಗೆಲುವಿನ ಮುಖವೇ

ಸಂಪೂರ್ಣವಾಗಿ ಚೇತರಿಸಿಕೊಂಡದನ್ನು ಸಾರುತ್ತಿತ್ತು.

'ಸರಿ ಇನ್ನೊಂದು ಸಾರಿ, ಬಯಾಪ್ಸಿಗೆ ಹೋಗಿ ಬಾ' ಎಂದು ಸಲಹೆ ನೀಡಿದೆ.

"ಇಲ್ಲ ಡಾಕ್ಟರ್, ನಿಮ್ಮ ಕೈ ಗುಣದಿಂದ ನನ್ನ ಕಾಯಿಲೆ ಸಂಪೂರ್ಣ ವಾಸಿಯಾಗಿದೆ. ಇನ್ನೊಮ್ಮೆ ನನಗೆ ಕೊಲೊನೋಸ್ಕೋಪಿ, ಬಯಾಪ್ಸಿಗಳ ಅಗತ್ಯವೇ ಇಲ್ಲ ಎಂದು ವಿಶ್ವಾಸ ಸಂತೃಪ್ತಿಯಿಂದ, ಖಡಾಖಂಡಿತವಾಗಿ ನುಡಿದ. 'ಕಿದ್ವಾಯಿ ಆಸ್ಪತ್ರೆಯವರು ಕೊಟ್ಟ, ನಿನ್ನ ಕಾಯಿಲೆಯ ರಿಪೋರ್ಟ್‌ಗೆ ಅನುಗುಣವಾಗಿ ಚಿಕಿತ್ಸೆ ನೀಡಿದ್ದೇನೆ. ನಿನಗೇ ಪುನಃ ಬಯಾಪ್ಸಿ, ಕೊಲೊನೋಸ್ಕೋಪಿ ಬೇಡವೆಂದು ಖಾತ್ರಿಯಾಗಿದ್ದರೆ ನಿನ್ನಿಷ್ಟ' ಎಂದೆ.

ಇದಾಗಿ ನಾಲ್ಕು ತಿಂಗಳುಗಳ ನಂತರ ಕೇಶವನ್, ಶುಗರ್ ರಿಪೋರ್ಟ್ ತೋರಿಸಲು ಕ್ಲಿನಿಕ್‌ಗೆ ಬಂದಿದ್ದ. ನೋಡಲು ಚೆನ್ನಾಗಿ, ತೂಕವೂ ಜಾಸ್ತಿಯಾದಂತೆ ಕಾಣುತ್ತಿದ್ದ. ನನ್ನ ಸಲಹೆಯಂತೆ ಕ್ಲಿನಿಕ್‌ನಲ್ಲಿನ ವೇಯಿಂಗ್ ಮಷೀನ್‌ನಲ್ಲಿ ತೂಗಿ ಎರಡು ಕೆಜಿ ಜಾಸ್ತಿಯಾಗಿರುವುದನ್ನು ಖಚಿತಪಡಿಸಿಕೊಂಡು,

"ನೋಡಿ ಸರ್, ಕ್ಯಾನ್ಸರ್ ಇದ್ದರೆ ನನ್ನ ತೂಕ ಜಾಸ್ತಿ ಆಗ್ತದ? ಹಾಗೆ ಚೆನ್ನಾಗೆ ಊಟ ಕೂಡ ಮಾಡುತ್ತೇನೆ. ಸುಸ್ತು ಕೂಡ ಏನೂ ಇಲ್ಲ ಎಂದು ತನಗೆ ಕ್ಯಾನ್ಸರ್ ಇಲ್ಲವೆಂದು, ನನಗೆ ಸಮಜಾಯಿಷಿ ಕೊಡಲಾರಂಭಿಸಿದ. ನಂತರದ ಈ ಹದಿಮೂರು ವರ್ಷಗಳಲ್ಲಿ ಕೇಶವನ್ ಅನೇಕ ಬಾರಿ ನನ್ನಲ್ಲಿಗೆ ಸಲಹೆಗಾಗಿ ಬರುತ್ತಿದ್ದಾನೆ. ಚೆನ್ನಾಗೇ ಇದ್ದಾನೆ. ಹಾಗೆ ಪ್ರತಿ ಬಾರಿ ಬಂದಾಗಲೂ ತೂಕ ನೋಡಿಕೊಂಡು ಸಮಾಧಾನಪಟ್ಟುಕೊಳ್ಳುತ್ತಾನೆ. ಆದರೆ ನನ್ನನ್ನು ಕಾಡುವ ಸಮಸ್ಯೆ ಎಂದರೆ, ಮೊದಲು ಬಂದ ಹಿಸ್ಟೊ ಫೆಥಾಲಜಿ ರಿಪೋರ್ಟ್ ತಪ್ಪಾಗಿದ್ದು ಹೇಗೆ? ನನ್ನ ಊಹೆಯ ಪ್ರಕಾರ, ಫೆಥಾಲಜಿಸ್ಟ್ ಬೇರೆ ಯಾವುದೋ ಕ್ಯಾನ್ಸರ್ ರೋಗಿಯ ಸ್ಲೈಡನ್ನು ಪರೀಕ್ಷಿಸಿ, ರಿಪೋರ್ಟ್ ಬರೆದು ಕೇಶವನ್ ಹೆಸರು ಹಾಕಿರಬಹುದು. ಅದೃಷ್ಟವಶಾತ್, ಕೇಶವನ್‌ಗೆ ಸ್ಲೈಡ್ ಕೊಡುವಾಗ ಅವನದ್ದೇ ಸ್ಲೈಡ್ ಅನ್ನು ಕೊಟ್ಟಿರುತ್ತಾರೆ. ಹಾಗಾಗಿ ಕಿದ್ವಾಯಿಯಲ್ಲಿ ಅವನ ಸ್ಲೈಡನ್ನು ಪುನಃಪರಿಶೀಲಿಸಿ ಸರಿಯಾದ ರಿಪೋರ್ಟ್ ಕೊಟ್ಟಿದ್ದರು. ಆದರೆ ಲ್ಯಾಬೋರೇಟರಿ ಹಾಗೂ ಪೆಥಾಲಜಿಸ್ಟ್‌ರ ಬೇಜವಾಬ್ದಾರಿತನದಿಂದಾದ ಅವಾಂತರದಲ್ಲಿ, ರೋಗಿಗೆ ಹಾಗೂ ಆತನ ಮನೆಯವರಿಗಾದ ತೊಂದರೆ, ಮನಸ್ಸಿಗಾದ ಆಘಾತಕ್ಕೆ ಪರಿಹಾರ ಕಲ್ಪಿಸಲಾದೀತೇ?

ಈ ತರಹದ ಅನುಭವಗಳ ಸರಮಾಲೆಯಿಂದ, ನಾನೊಂದು ತೀರ್ಮಾನಕ್ಕೆ ಬಂದಿದ್ದೇನೆ. ನನಗೆ ರೋಗಿಯ ಕಾಯಿಲೆಗಳ ಬಗ್ಗೆ ಸಂದೇಹ ಬಂದಲ್ಲಿ, ಕ್ಯಾನ್ಸರ್ ಮುಂತಾದ ಗಂಭೀರ ಕಾಯಿಲೆ ಅನಿಸಿದಲ್ಲಿ, ಎರಡನೆಯ (ಸೆಕೆಂಡ್ ಒಪೀನಿಯನ್) ಅಥವಾ ಮೂರನೆಯ(ಥರ್ಡ್ ಒಪೀನಿಯನ್) ಅಭಿಪ್ರಾಯವನ್ನೂ ತೆಗೆದುಕೊಳ್ಳುತ್ತೇನೆ.

# ಋಣ ಪ್ರಜ್ಞೆ

ಸ್ನೇಹಿತರಾದ ಅಹಮದ್ ಸಾಹೇಬರು ಮುಂಬೈಯಿಂದ ವರ್ಗವಾಗಿ, ಉತ್ತರ ಕನ್ನಡದ ಮಂಕಿಯಲ್ಲಿ ಹೊಸದಾಗಿ ಪ್ರಾರಂಭವಾದ ಸಿಂಡಿಕೇಟ್ ಬ್ಯಾಂಕಿಗೆ ಬಂದಿದ್ದರು. ಇವರ ಊರು ಬ್ರಹ್ಮಾವರದ ಹತ್ತಿರದಲ್ಲಿರುವ ಉಪ್ಪಿನಕೋಟೆ. ನಾನು ಬ್ರಹ್ಮಾವರಕ್ಕೆ ಬಂದಮೇಲೆ ಅವರ ಕುಟುಂಬ ವೈದ್ಯನು ಆಗಿದ್ದೆ. ಆಗ ಕ್ಲಿನಿಕ್ಕಿಗೆ ಬಂದಿದ್ದ ಅಹಮದ್ ಸಾಹೇಬರು ನನ್ನ ಹಿತವನ್ನು ಬಯಸಿ ಒಂದು ಸಲಹೆಯನ್ನು ನೀಡಿದರು. 'ಮಂಕಿಯ ಸುತ್ತಮುತ್ತಲಿನಲ್ಲಿ ಯಾರೂ ಎಂಬಿಬಿಎಸ್ ಡಾಕ್ಟರ್‌ಗಳು ಇಲ್ಲ. ನಮ್ಮ ಬ್ಯಾಂಕಿನ ಅಡಿಯಲ್ಲೇ ಒಂದು ಮಳಿಗೆಯು ಕಾಲಿ ಇದೆ. ಬಾಡಿಗೆಯು ತಿಂಗಳಿಗೆ 40 ರೂಪಾಯಿ. ಕಟ್ಟಡದ ಮಾಲೀಕನು ನಮ್ಮ ಗ್ರಾಹಕನೇ ಹಾಗಾಗಿ ನೀವು ಅಲ್ಲಿ ಬಂದು ನಿಮ್ಮ ಕ್ಲಿನಿಕ್ಕನ್ನು ತೆರೆಯಿರಿ' ಎಂಬ ಸಲಹೆಯನ್ನು ನೀಡಿ, ಯೋಚಿಸಿ ಎಂದರು.

ಅದಾಗಲೇ ನಾನು ಗ್ರಹಸ್ಥನಾಗಿ ಪುಟ್ಟ ಮಗುವೊಂದು ನಮ್ಮ ಸಂತೋಷವನ್ನು ಹೆಚ್ಚಿಸಿತ್ತು. ಹೀಗೆ ನನ್ನ ಸಂಸಾರ ಬೆಳೆದರು ಕ್ಲಿನಿಕ್ಕಿನ ಸ್ಥಿತಿ ಹಾಗೆ ಇತ್ತು. ಬ್ರಹ್ಮಾವರದ ಕ್ಲಿನಿಕ್ಕಿನಲ್ಲಿ ರೋಗಿಗಳಿಗಾಗಿ ಕಾಯುವುದು ತಪ್ಪಿರಲಿಲ್ಲ. ಅದರಿಂದ ಅಹಮದ್ ಸಾಹೇಬರ ಸಲಹೆಯನ್ನು ಕುರಿತು ಯೋಚಿಸುವಂತಾಯಿತು. ನಾನು, ನನ್ನವಳಾದ ಜಯಂತಿಯೊಂದಿಗೆ ಚರ್ಚಿಸಿ, ಒಂದು ಭಾನುವಾರ ಮಂಕಿಯ ಊರನ್ನು ನೋಡಲು ಹೋದೆವು. ಅದೊಂದು ರೈತಾಪಿ ಜನರಿಂದ ಕೂಡಿದ ಕುಗ್ರಾಮ. ಊರಿನ ಒಂದು ಭಾಗದಲ್ಲಿ ಮುಸಲ್ಮಾನರ ದೊಡ್ಡ ವಸತಿ ಪ್ರದೇಶವಿತ್ತು. ಅಲ್ಲಿ ನವಾಯಿತ ಎಂಬ ಮುಸ್ಲಿಮರ ಒಂದು ವರ್ಗದ ಜನರೇ ಅಧಿಕವಾಗಿದ್ದರು. ಇದೆಲ್ಲವನ್ನು ನೋಡಿ ಮಂಕಿಗೆ ನನ್ನ ಕ್ಲಿನಿಕ್ಕನ್ನು ವರ್ಗಾಯಿಸಲು ನಿಶ್ಚಯಿಸಿದೆ. ಅದರಂತೆ 1975 ಫೆಬ್ರುವರಿಯ ಒಂದು ಶುಭದಿನ ನನ್ನ ಕ್ಲಿನಿಕ್ ಮಂಕಿಯಲ್ಲಿ ಪ್ರಾರಂಭವಾಯಿತು.

ಕ್ಲಿನಿಕ್ ಪ್ರಾರಂಭಿಸಿದ ದಿನದಿಂದಲೇ ರೋಗಿಗಳು ಸಾಕಷ್ಟು ಬರತೊಡಗಿದರು. ಆದರೆ ಅವರೆಲ್ಲ ಕಡುಬಡವರು. ಹೆಚ್ಚಿನ ಶುಲ್ಕವನ್ನು ವಿಧಿಸುವಂತಿಲ್ಲ. ವಿಧಿಸಿದ ಶುಲ್ಕವು ಬರುವ ಭರವಸೆ ಇರಲಿಲ್ಲ. ಇಂತಹ ಸಂದರ್ಭದಲ್ಲಿ ರೋಗಿಯ ದೈಹಿಕ ಆರೋಗ್ಯಕ್ಕಿಂತ, ಮಾನಸಿಕ ಆರೋಗ್ಯದ ಅನಾವರಣವಾಗುವುದು. ವೈದ್ಯನ ಮನಸ್ಥಿತಿಯ ಪರೀಕ್ಷೆಯು ಆಗುವುದು.

ಹೀಗೆ ನಮ್ಮ ಸಂಸಾರ ಸಾಗತೊಡಗಿತ್ತು. ತಿಂಗಳುಗಳುರುಳಿ ಆಗಸ್ಟ್,

ಸಪ್ಟೆಂಬರ್ ಕೂಡ ಬಂದಿತ್ತು. ಇನ್ನೂ ಟಿವಿ ಇತ್ಯಾದಿ ಮನೋರಂಜನ ವಸ್ತುಗಳು ಕಾಣದಿರುವ ಕಾಲ. ದೂರದ ಹೊನ್ನಾವರದಲ್ಲಿ ಟೆಂಟ್ ಸಿನಿಮಾ ಥಿಯೇಟರ್ ಇತ್ತು. ಜಯಂತಿಯ ಬಹುದಿನದ ಬೇಡಿಕೆಯಂತೆ, ಆ ಭಾನುವಾರ ಮಧ್ಯಾಹ್ನದ ನಂತರ ಹೊನ್ನಾವರಕ್ಕೆ ಹೋಗಿ ಒಂದು ಸಿನಿಮಾ ನೋಡಿ ಬರುವುದೆಂದು ನಿರ್ಧರಿಸಿಕೊಂಡೆವು. ಭಾನುವಾರ ಅರ್ಧ ದಿನದ ಕ್ಲಿನಿಕ್ ಆದ್ದರಿಂದ ಹೀಗೆ ಯೋಜನೆಯನ್ನು ಸಿದ್ಧಪಡಿಸಿಕೊಂಡಿದ್ದೆವು.

ಬೆಳಿಗ್ಗೆ 8:30 – 9:00 ಗಂಟೆಗೆ ಕ್ಲಿನಿಕ್ ಅನ್ನು ತೆರೆಯುತ್ತಿದ್ದೆ. ಹಾಗಾಗಿ ಬೇಗ ಸ್ನಾನದ ತಯಾರಿಯಲ್ಲಿದ್ದೆ. ಆಗ ಒಬ್ಬ, ರೋಗಿಯ ಚಿಕಿತ್ಸೆಗಾಗಿ ಅವರ ಮನೆಗೆ ಕರೆದುಕೊಂಡು ಹೋಗಲು ಬಂದ. ವಿಚಾರಿಸಿದಾಗ ತಿಳಿಯಿತು, ಬಂದವನ ತಂದೆಗೆ ಮಧ್ಯರಾತ್ರಿಯಿಂದಲೇ 15 ರಿಂದ 20 ಬಾರಿ ವಾಂತಿ ಬೇಧಿಯಾಗಿ ತುಂಬಾ ನಿತ್ರಾಣನಾಗಿದ್ದಾನೆ. ಹಾಗಾಗಿ ಪರೀಕ್ಷಿಸಲು ಬರಬೇಕೆಂದು ದೈನ್ಯವಾಗಿ ಬೇಡಿಕೊಂಡ.

ಅದಾಗಲೇ ಆ ಊರಿನ ಭೌಗೋಳಿಕ ಚಿತ್ರ ನನ್ನ ಮನಸ್ಸಿನಲ್ಲಿ ಮೂಡಿತ್ತು. ಅದರಿಂದ ಆತನ ಮನೆ ಇರುವ ಸ್ಥಳವನ್ನು ತಿಳಿದುಕೊಂಡೆ. ನನ್ನ ಕ್ಲಿನಿಕ್ಕಿನಿಂದ ಸುಮಾರು ನಾಲ್ಕೈದು ಕಿಲೋಮೀಟರ್ ದೂರದ 'ಆಡುಕಳ' ಎಂಬ ಊರಿನಲ್ಲಿ ಆತನ ಮನೆ ಇತ್ತು. ಎಂಬಿಬಿಎಸ್ ಡಾಕ್ಟರ್ ಆಗಿ ಸರ್ವಿಸ್ ಮಾಡುತ್ತಿರುವ ನನ್ನಲ್ಲಿ ಈಗಿನ ಕಾಲದಲ್ಲಿ ಯಾರೂ ನಂಬದಂತಹ ಒಂದು ವಾಹನವಿತ್ತು. ಅದು ಸೈಕಲ್. ಅವನ ಮನೆಯವರೆಗೆ ಸೈಕಲ್ ಹೋಗಬಹುದಾದ ರಸ್ತೆ ಇದ್ದರೂ, ಗುಡ್ಡವೊಂದನ್ನು ಹತ್ತಿಳಿಯಬೇಕಾಗಿತ್ತು. ನನ್ನ ವಯಸ್ಸು, ಉತ್ಸಾಹ ಈ ಸಾಹಸವನ್ನೆಲ್ಲ ಪ್ರೋತ್ಸಾಹಿಸುತ್ತಿತ್ತು. ನಾನು ಸ್ನಾನ ತಿಂಡಿಗಳನ್ನು ಮುಗಿಸಿ ಸೈಕಲ್ಲೇರಿ ಹೊರಟೆ.

ನನ್ನನ್ನು ಕರೆಯಲು ಬಂದ ಯುವಕ ಅವನ ಮನೆಯ ಪಕ್ಕದಲ್ಲಿ ನಿಂತು ಕಾಯುತ್ತಿದ್ದ. ಮನೆಯೆಂದರೆ ಕಾಣುವುದಕ್ಕೊಂದು ಸೂರು, ಹೇಳುವುದಕ್ಕೆ ಗುಡಿಸಲು. ಮಳೆಯನ್ನು ತಡೆಯದಿದ್ದರೂ, ಬಿಸಿಲನ್ನಂತೂ ಮರೆಮಾಡುತ್ತಿತ್ತು. ಒಳಗಡೆ ಕತ್ತಲೆ. ಆ ಕತ್ತಲೆಗೊಂದು ಮೂಲೆ. ಅಲ್ಲಿ ಸುಮಾರು 55 ವರ್ಷದ ವ್ಯಕ್ತಿಯೊಬ್ಬ ಪ್ರಾಣಾಂತಿಕ ಸ್ಥಿತಿಯಲ್ಲಿ ಮಲಗಿದ್ದ. ಕಾಲರಾ ತರಹದ ಕಾಯಿಲೆಯೊಂದು ಈತನನ್ನು ಬಡಿದಿತ್ತು. ಹೀಗೆ ನಿರಂತರವಾಗಿ ವಾಂತಿಬೇದಿಯಾಗಿ, ಶರೀರದಲ್ಲಿ ನೀರಿನ ಅಂಶವೇ ಕಡಿಮೆಯಾಗಿ ಬಿಡುವುದು. ಆಮೇಲೆ ಸಾವನ್ನಪ್ಪುವ ಸಂಭವವು ಇರುತ್ತದೆ. ಈ ರೋಗಿ ಆ ಹಂತದಲ್ಲಿ ಇದ್ದ. ಕೂಡಲೇ ವಾಂತಿಭೇದಿ ನಿಲ್ಲುವ ಇಂಜೆಕ್ಷನ್ ಅನ್ನು ನೀಡಿ, ಬಾಯಿಯ ಮೂಲಕ ಉಪ್ಪು ಮತ್ತು ಸಕ್ಕರೆಯ ಮಿಶ್ರಣದ ದ್ರಾವಣವನ್ನು ನೀಡಲು ತಿಳಿಸಿದೆ. ಹೀಗೆ ಪ್ರಥಮ ಚಿಕಿತ್ಸೆಯಾದ ಕೂಡಲೇ, ಆತನ ಪರಿಸ್ಥಿತಿಯನ್ನು ನೋಡಿ, ತಕ್ಷಣ ಆತನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಲು ಸೂಚಿಸಿದೆ.

ಆಸ್ಪತ್ರೆ ಎಂದರೆ ಅಲ್ಲಿಂದ 12 ಕಿಲೋಮೀಟರ್ ದೂರದ ಹೊನ್ನಾವರ ಅಥವಾ 25 ಕಿಲೋಮೀಟರ್ ದೂರದ ಭಟ್ಕಳಕ್ಕೆ ಹೋಗಬೇಕಾಗಿತ್ತು. ಅವರ ಸ್ಥಿತಿ ಹೇಗಿತ್ತೆಂದರೆ, ನನ್ನ ಶುಲ್ಕವನ್ನೇ ನೀಡುವುದು ಕಷ್ಟವಾಗಿತ್ತು. ಅದರಲ್ಲಿ ಇನ್ನು ಟ್ಯಾಕ್ಸಿ ಮಾಡಿಕೊಂಡು ಆಸ್ಪತ್ರೆಗೆ ಹೋಗಲು ಸಾಧ್ಯವೇ?! ಅದಕ್ಕಾಗಿ ನನ್ನ ಪ್ರಯತ್ನವೆಂಬಂತೆ ಔಷಧಿ ಮಾತ್ರೆಗಳನ್ನೆಲ್ಲ ಕೊಟ್ಟು ತಿರುಗಿ ಬಂದೆ.

ಅಷ್ಟರಲ್ಲಿ ಹಲವಾರು ರೋಗಿಗಳು ಕ್ಲಿನಿಕ್ಕಿನಲ್ಲಿ ಕಾದು ಕುಳಿತಿದ್ದರು. ಎಲ್ಲಾ ರೋಗಿಗಳನ್ನು ಪರೀಕ್ಷಿಸಿ, ಒಂದು ಗಂಟೆಗೆ ಮನೆಗೆ ಬಂದೆ. ಮೊದಲೇ ನಾವು ತೀರ್ಮಾನಿಸಿಕೊಂಡಂತೆ ಊಟ ಮುಗಿಸಿ, ಹೊನ್ನಾವರಕ್ಕೆ ಬಸ್ಸಿನಲ್ಲಿ ಹೊರಡುವ ಸಂಭ್ರಮದಲ್ಲಿದ್ದೆವು. ಅಷ್ಟರಲ್ಲಿ ಗೇಟಿನ ಮುಂದೆ ಒಂದು ಕಂಬಳಿಯಲ್ಲಿ ಒಬ್ಬಾತನನ್ನು ಸುತ್ತಿ, ನಾಲ್ಕು ಜನ ಹೊತ್ತು ತರುವುದು ಕಾಣಿಸಿತು. ಒಬ್ಬಳು ಮುಂದೆ ಓಡಿಬಂದು "ಸ್ವಾಮಿ ಡಾಕ್ಟ್ರೇ! ನಮಗೆ ನೀವು ತಿಳಿಸಿದಂತೆ ನಮ್ಮ ತಂದೆಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗುವ ಶಕ್ತಿ ಇಲ್ಲ. ಹಾಗಾಗಿ ಅವರನ್ನು ನಿಮ್ಮಲ್ಲಿಗೆ ಕರೆದುಕೊಂಡು ಬಂದಿದ್ದೇವೆ. ದೊಡ್ಡ ಮನಸ್ಸು ಮಾಡಿ ನೀವೇ ಅವರನ್ನು ಕಾಪಾಡಬೇಕು." ಎಂದು ತುಂಬಾ ದೈನ್ಯದಿಂದ ಅಲವತ್ತು ಕೊಳ್ಳುತ್ತಿದ್ದಳು. ಅವಳಾದರು ನಾನು ಬೆಳಿಗ್ಗೆ ಉಪಚರಿಸಿದ ರೋಗಿ ಗಣಪೇಗೌಡನ ಮಗಳಾಗಿದ್ದಳು.

ನನ್ನ ಮನೆಯವಳಾದ ಜಯಂತಿ, ಬೆಳಿಗ್ಗೆಯಿಂದಲೇ ಹೊನ್ನಾವರಕ್ಕೆ ಹೊರಡುವ ಸಂಭ್ರಮದಲ್ಲಿದ್ದಳು. ಅದೇ ಉತ್ಸಾಹದಲ್ಲಿ ಮನೆಯ ಕೆಲಸವನ್ನೆಲ್ಲ ಮುಗಿಸಿ ಸಿದ್ಧಳಾಗಿದ್ದಳು. ಬೆಂಗಳೂರಿನಲ್ಲಿ ಹುಟ್ಟಿ ಬೆಳೆದ ಅವಳಿಗೆ ಈ ಕುಗ್ರಾಮದ ವಾಸವೇ ಕಷ್ಟದ್ದಾಗಿತ್ತು, ಮೇಲಿಂದ ಅಪರೂಪಕ್ಕೆ ಸಿಕ್ಕ ವಿರಾಮವು ಮಾಯವಾಯಿತು. ನನಗೆ ಅವಳಿಗಾಗುವ ನಿರಾಸೆಯನ್ನು ಕಂಡು ವಿಷಾದವಾಯಿತು. ಅವಳಾದರು ಈ ಸಿನಿಮಾ ಸಂಭ್ರಮವನ್ನು ಮೀರಿ, ಒಂದು ಜೀವದ ಸಂಕಟವನ್ನು ಕಂಡಳು. ನನಗಿಂತ ಮುಂದೆ ಹೋಗಿ ಮುಂಬಾಗಿಲನ್ನು ತೆರೆದು, ಜಗಲಿಯಲ್ಲಿ ಆ ರೋಗಿಯನ್ನು ಮಲಗಿಸಲು ಸಲಹೆಯನ್ನು ನೀಡಿದಳು. ಅವಳ ಮಾನವೀಯ ಹೃದಯವು ಡಾಕ್ಟರ್‌ನೊಂದಿಗೆ ದಾಂಪತ್ಯವನ್ನು ನಡೆಸುತ್ತಿತ್ತು ಎಂದು ಆ ಸಂದರ್ಭ ತಿಳಿಸಿತು.

ಕೂಡಲೇ ಗೌಡನನ್ನು ಪರೀಕ್ಷಿಸಿದೆ. ಅವನು ಮಾತನಾಡುವ ಸ್ಥಿತಿಯಲ್ಲೂ ಇರಲಿಲ್ಲ. ಡಿಹೈಡ್ರೇಶನ್‌ನಿಂದಾಗಿ ಶರೀರ ನಿಸ್ತೇಜವಾಗಿತ್ತು. ಹತ್ತಿರದಲ್ಲೇ ಇದ್ದ ಕ್ಲಿನಿಕ್ಕಿನಲ್ಲಿ, ಎಮರ್ಜೆನ್ಸಿಗಾಗಿ ಇದ್ದ ಎರಡು ಬಾಟಲ್ ಗ್ಲುಕೋಸನ್ನು ತರಿಸಿ ಗೌಡನಿಗೆ ನೀಡಲು ಪ್ರಾರಂಭಿಸಿದೆ. ಹಾಗೆ ನನ್ನ ಕಾಂಪೌಂಡರ್ ಸುಬ್ಬರಾಯನನ್ನು ಹೊನ್ನಾವರಕ್ಕೆ ಕಳುಹಿಸಿ, ಇನ್ನೆರಡು ಬಾಟಲ್ ಸಲೈನ್ ತರಿಸಿ ಅದನ್ನು ಕೊಟ್ಟದ್ದಾಯಿತು. ಸಂಜೆ ಏಳು ಗಂಟೆಯ ಸಮಯಕ್ಕೆ ಗ್ಲುಕೋಸ್,

ಸಲೈನ್ ಮುಗಿಯಿತು. ಗಣಪೇಗೌಡನಿಗೆ ಸ್ವಲ್ಪ ಜೀವಬಂದ ಹಾಗಾಯಿತು. ಮಗಳು ಸಮಾಧಾನಗೊಂಡಳು. ಆ ರಾತ್ರಿ ನಮ್ಮ ಮನೆಯ ಜಗುಲಿ, ಆಸ್ಪತ್ರೆಯ ವಾರ್ಡ್ ಆಗಿ ಪರಿವರ್ತನೆ ಆಯಿತು. ಗಣಪೇಗೌಡ ಮತ್ತು ಮಗಳು ಅಲ್ಲೇ ಮಲಗಿಕೊಂಡರು. ಬೆಳಿಗ್ಗೆ ಏಳುವಾಗ ಗಣಪೇಗೌಡ ತುಂಬಾ ಸುಧಾರಿಸಿದ್ದ. ಮಗಳೊಂದಿಗೆ ಮನೆಗೆ ಹೊರಡಲು ಅಣಿಯಾಗುತ್ತಿದ್ದ. ನನ್ನ ಶುಲ್ಕವಿರಲಿ, ಔಷಧಿಯ ಖರ್ಚನ್ನು ಕೊಡುವ ಸ್ಥಿತಿಯಲ್ಲೂ ಆತನಿರಲಿಲ್ಲ. ಮೊದಲೇ ಸೊರಗಿದ ದೇಹ, ದೈನ್ಯವಾದ ಕಣ್ಣಿನಲ್ಲಿ ಕೃತಜ್ಞತೆ ತೊಟ್ಟಿಕ್ಕುತ್ತಿತ್ತು. 'ಸ್ವಾಮಿ! ದೇವರಂತೆ ನನ್ನ ಪ್ರಾಣವನ್ನು ಉಳಿಸಿದಿರಿ. ಇನ್ನೊಂದು ಸಾರಿ ಬಂದು ನೋಡುತ್ತೇನೆ' ಎಂದು, ನಮಸ್ಕರಿಸಿ ಹೊರಟ. ಮಗಳು ಆತನನ್ನು ಹಿಂಬಾಲಿಸಿದಳು.

ವೈದ್ಯರೆಂದರೆ ಶ್ರೀಮಂತರೆಂಬ ಭಾವ ಸಹಜವಾಗಿ ಎಲ್ಲರಲ್ಲೂ ಇರುತ್ತದೆ. ಸೇವಾ ಮನೋಭಾವದಿಂದ ಹಳ್ಳಿಗಳಲ್ಲಿ ಕ್ಲಿನಿಕ್ಕನ್ನು ತೆರೆದ ಬಹುತೇಕ ವೈದ್ಯರ ಸ್ಥಿತಿ, ರೋಗಿಗಳ ಜೀವನ ಪರಿಸ್ಥಿತಿಗಿಂತ ಭಿನ್ನವಾಗಿರಲಿಲ್ಲ. ಬಡವರಿಗೆ ಕೊಡುವ ಮನಸ್ಸಿದೆ ಕೊಡಲು ದುಡ್ಡಿಲ್ಲ. ಶಕ್ತಿ ಇರುವರಿಗೆ ಕೊಡುವ ಮನಸ್ಸಿಲ್ಲ! ಎಲ್ಲವನ್ನೂ ಪುಕ್ಕಟೆ ಪಡೆಯಬೇಕೆಂಬ ರೋಗಕ್ಕೆ ಮದ್ದೆಲ್ಲಿ?? ತತ್ಕಾಲದ ಸರಕಾರಕ್ಕೂ ಜನರ ಬಡತನ, ರೋಗ, ಅಜ್ಞಾನವೆ ಅಧಿಕಾರದ ಮೂಲವಾಗಿತ್ತು. ಹಾಗಾಗಿ ಹಳ್ಳಿಗಳಲ್ಲಿ ಸೇವೆ ಸಲ್ಲಿಸುವ ವೈದ್ಯರಿಗೆ ಸರಕಾರದ ಸಹಾಯವೊ, ಪ್ರೋತ್ಸಾಹವೊ ಮರೀಚಿಕೆಯಾಗಿತ್ತು.

ಇದಾಗಿ ಒಂದು ತಿಂಗಳ ನಂತರ ನನ್ನ ಮನೆಯ ಬಾಗಿಲಲ್ಲಿ "ಒಡೆಯಾ" ಎಂಬ ಕೂಗು ಕೇಳಿಸಿ, ಹೊರಬಂದು ನೋಡಿದರೆ, ಗಣಪೇಗೌಡ! 'ಸ್ವಾಮಿ ನಿಮ್ಮ ದಯೆಯಿಂದ ಬದುಕಿದ್ದೇನೆ. ತೆಗೆದುಕೊಳ್ಳಿ, ನಮ್ಮಲ್ಲಿ ಬೆಳೆದ ಮೊಗೆಕಾಯಿ. ಎಂದು ನಾಲ್ಕೈದು ಸೌತೆಕಾಯಿಗಳನ್ನು ಕೊಟ್ಟು, ನಮಸ್ಕರಿಸಿ ಹೊರಟ. ಗಣಪೇಗೌಡನ ಋಣ, ದುಡ್ಡಿನಿಂದ ಪರಿಹಾರವಾಗದಿದ್ದರೂ ಹಸಿವನ್ನು ನೀಗಿಸಿತಲ್ಲ ಎಂದು ಅಂದುಕೊಂಡೆ.

ಇನ್ನೊಂದು ತಿಂಗಳು ಕಳೆದಾಗ ಪುನಃ ಮನೆಯ ಬಾಗಿಲಿನಲ್ಲಿ ಅದೇ ಕೂಗು ಅದೇ ಸ್ವರ ಕೇಳಿಸಿತು. ಬಾಗಿಲಿಗೆ ಬಂದಾಗ ನನ್ನ ಊಹೆ ನಿಜವಿತ್ತು. ಗಣಪೇಗೌಡ ಪ್ರತ್ಯಕ್ಷನಾಗಿದ್ದ. 20 ರೂಪಾಯಿಯ ಹೊಸ ನೋಟನ್ನು ಜೋಬಿನಿಂದ ತೆಗೆದು ನನ್ನ ಕೈಗಿಡುತ್ತಾ, "ಸ್ವಾಮಿ! ಬೇಜಾರು ಮಾಡಿಕೋಬೇಡಿ. ಈಗ ಬ್ಯಾಂಕಿನಿಂದ ಬರುತ್ತಿದ್ದೇನೆ. ನಮಗೆಲ್ಲ ಬ್ಯಾಂಕಿನಿಂದ ನೂರು ರೂಪಾಯಿ ಸಾಲ ಕೊಟ್ಟಿದ್ದಾರೆ. ನಿಮ್ಮ ಶುಲ್ಕವನ್ನು ಕೊಟ್ಟಿರಲಿಲ್ಲ. ಹಾಗಾಗಿ ತೀರಿಸಿ ಹೋಗೋಣ ಎಂದು ಬಂದೆ" ಎಂದ.

ಇಂದಿರಾ ಗಾಂಧಿ ತುರ್ತು ಪರಿಸ್ಥಿತಿಯನ್ನು ಹೇರಿ, ಹಾಳಾದ ತನ್ನ ಹೆಸರನ್ನು ಸರಿ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಅದಕ್ಕಾಗಿ ಇಪ್ಪತ್ತು

ಅಂಶಗಳ ಕಾರ್ಯಕ್ರಮವೊಂದು ಘೋಷಣೆಯಾಗಿ, ಅದರಲ್ಲಿ ಬಡವರಿಗೆ ನೂರು ರೂಪಾಯಿ ಸಾಲ ಕೊಡುವುದು ಒಂದಾಗಿತ್ತು. ಆ ಸಾಲ ಪಡೆಯುವವರ ಪಟ್ಟಿಯಲ್ಲಿ ಗಣಪೇಗೌಡನ ಹೆಸರು ಸೇರಿತು. ಹಾಗಾಗಿ ಅಲ್ಲಿ ಪಡೆದ ಸಾಲದಿಂದ ಇಲ್ಲಿಯ ಋಣವನ್ನು ತೀರಿಸಿದ್ದ.

ಅನಕ್ಷರಸ್ಥ ಗಣಪೇಗೌಡನ ಋಣ ಪ್ರಜ್ಞೆಯಿಂದ ನನ್ನ ಮನಸ್ಸು ಆರ್ದ್ರವಾಯಿತು. ಅಂದು ಸಿನಿಮಾ ನೋಡಲಾಗದ ಬೇಸರವು ಮರೆತು, ಈತನ ಉಸಿರನ್ನು ನೋಡಿದ್ದು ಈಗಲೂ ಸಂತೋಷವನ್ನು ನೀಡುವುದು.

# ರೋಗವೊಂದು ರೂಪ ಹಲವು

ಸುಮಾರು 50 ವರ್ಷ ವಯಸ್ಸಿನ ಪದ್ಮಮ್ಮ ಯಾವಾಗಲೂ ನನ್ನ ಕ್ಲಿನಿಕ್ಕಿಗೆ ಬರುತ್ತಿದ್ದರು. ನನ್ನ ಕ್ಲಿನಿಕ್ಕಿನ ಹತ್ತಿರದಲ್ಲೇ ಅವರು ಮನೆ ಕಟ್ಟಿಸಲು ಪ್ರಾರಂಭಿಸಿದ್ದರು ಒಂದು ದಿನ ಒಬ್ಬಾತ ಅವಸರದಲ್ಲಿ ಬಂದು ನಿಮ್ಮಲ್ಲಿಗೆ ಯಾವಾಗಲೂ ಬರುವ ಪದ್ಮಮ್ಮನವರು ಇಲ್ಲೇ ಮನೆ ಕಟ್ಟಿಸುತ್ತಿದ್ದಾರೆ ಆ ಸ್ಥಳದಲ್ಲಿಯೇ ಈಗ ಅವರು ಫಿಟ್ಸ್ ಬಂದು ಬಿದ್ದಿದ್ದಾರೆ ತಾವು ಒಮ್ಮೆ ಬಂದು ನೋಡಬೇಕೆಂದು ವಿನಂತಿಸಿಕೊಂಡ

ಪದ್ಮಮ್ಮನಿಗೆ ಸ್ವಲ್ಪಮಟ್ಟಿಗೆ ಬಿಪಿ ಇತ್ತು ಆಗಾಗ ತಪಾಸಣೆಗೂ ಬರುತ್ತಿದ್ದಳು. ಅತ್ಯಂತ ಕಡಿಮೆ ಡೋಸಿನ ಮಾತ್ರೆಯಲ್ಲಿ ಪದ್ಮಮ್ಮನ ಬಿಪಿ ನಿಯಂತ್ರಣದಲ್ಲಿತ್ತು. ಮನೆ ಕಟ್ಟುವ ಕೆಲಸದಲ್ಲಿ ಮಗ್ನಳಾಗಿರುವುದರಿಂದ ಇತ್ತೀಚೆಗೆ ತಪಾಸಣೆಗೂ ಬಂದಿರಲಿಲ್ಲ.

ನನ್ನನ್ನು ಕರೆಯಲು ಬಂದವನ ಹಿಂದೆ ಹೊರಟೆ. ನನ್ನ ಕ್ಲಿನಿಕ್ಕಿನಿಂದ ಎರಡು ರಸ್ತೆಯ ಆ ಕಡೆಗೆ ಪದ್ಮಮ್ಮ ಮನೆ ಕಟ್ಟಿಸುತ್ತಿರುವ ಜಾಗವಿತ್ತು. ಅದೇ ಜಾಗದಲ್ಲಿ ಒಂದು ಕಡೆ ಪದ್ಮಮ್ಮನನ್ನು ಮಲಗಿಸಿದ್ದರು. ಒಂದು ಕೈಯಲ್ಲಿ ಫಿಟ್ಸ್ ನಿಯಂತ್ರಿಸುವುದಕ್ಕಾಗಿ ಹಿಡಿಸಿದ ಬೀಗದ ಕೈ ಹಾಗೆ ಇತ್ತು. ನಾನು ಪರೀಕ್ಷಿಸುವಾಗ ಫಿಟ್ಸ್ ಇನ್ನೂ ನಿಂತಿರಲಿಲ್ಲ. ಹಾಗಾಗಿ ಈ ರೋಗದ ನಿಯಂತ್ರಣಕ್ಕಾಗಿ ಇಂಜೆಕ್ಷನ್ನನ್ನು ನೀಡಿದೆ. ಬಿ ಪಿಯನ್ನು ಪರೀಕ್ಷಿಸಿದಾಗ ಅದು ಕೂಡ ಸರಿ ಇತ್ತು. ಸ್ವಲ್ಪ ಹೊತ್ತಿನಲ್ಲಿ ಪದ್ಮಮ್ಮ ಕಣ್ಣುಬಿಟ್ಟಳು. ಮನೆಗೆ ಕರೆದುಕೊಂಡು ಹೋಗಿ ಮಲಗಿಸುವಂತೆ ಹೇಳಿದೆ. ಮಾತ್ರೆಗಳನ್ನು ಬರೆದು ಕೊಟ್ಟು, ಸುಧಾರಿಸಿದ ನಂತರ ಕ್ಲಿನಿಕ್ಕಿಗೆ ಕರೆ ತರುವಂತೆ ಸಂಬಂಧಿಸಿದವರಿಗೆ ಹೇಳಿ ಬಂದೆ.

ಆ ದಿನ ಸಂಜೆಯೇ ಪದ್ಮಮ್ಮ ತಮ್ಮ ಮಗನೊಂದಿಗೆ ಕ್ಲಿನಿಕ್ಕಿಗೆ ಬಂದಳು. ಪದ್ಮಮ್ಮನನ್ನು ಪರೀಕ್ಷಿಸುತ್ತಾ, 'ಈ ಮೊದಲು ಯಾವತ್ತಾದರೂ ಹೀಗೆ ಫಿಟ್ಸ್ ಬಂದಿತ್ತಾ?' ಎಂದು ಕೇಳಿದೆ. 'ಇದೇ ಮೊದಲ ಬಾರಿ ಹೀಗಾಯಿತು!' ಎಂದು ಹೇಳುವುದರೊಂದಿಗೆ 'ಈಗ್ಗೆ ಒಂದು ತಿಂಗಳಿನಿಂದ ಆಗಾಗ ಸ್ವಲ್ಪ ತಲೆನೋವು ಬರುತ್ತಿತ್ತು. ಮಾತ್ರೆಯನ್ನು ತೆಗೆದುಕೊಂಡಾಗ ಕಡಿಮೆಯಾಗುತ್ತಿತ್ತು' ಎಂದಳು. ನಾನು 'ಪದ್ಮಮ್ಮನ ತಲೆಯ ಸಂಪೂರ್ಣ ಪರೀಕ್ಷೆ ಆಗಬೇಕು, ಮುಖ್ಯವಾಗಿ ಸಿಟಿ ಸ್ಕ್ಯಾನ್ ಹಾಗೂ ಬೆನ್ನು ಹುರಿಯಿಂದ ನೀರನ್ನು ತೆಗೆದು ಪರೀಕ್ಷೆ ಮಾಡಿಸಬೇಕು' ಎಂದು ಹೇಳಿದೆ. ನಾಳೆಯೆ ನಿಮಾನ್ಸ್ ಆಸ್ಪತ್ರೆಗೆ ಹೋಗಿ ಟೆಸ್ಟ್ ಮಾಡಿಸುವುದು

ಒಳ್ಳೆಯದು ಎಂದು, ರೆಫರೆನ್ಸ್ ಲೆಟರನ್ನು ಕೊಟ್ಟು ಕಳುಹಿಸಿದೆ.

ಇದಾಗಿ ನಾಲ್ಕು ದಿನಗಳಲ್ಲಿ ಪದ್ಮಮ್ಮ ಟೆಸ್ಟ್ ರಿಪೋರ್ಟ್‌ನೊಂದಿಗೆ ಬಂದಳು. 'ಡಾಕ್ಟರ್ ನನಗೆ ಬ್ರೈನ್ ನಲ್ಲಿ ಟಿ.ಬಿ ಆಗಿದೆಯಂತೆ. ಒಂದು ವರ್ಷಗಳ ಕಾಲ ಮಾತ್ರೆಯನ್ನು ನುಂಗಬೇಕೆಂದು ಹೇಳಿದ್ದಾರೆ' ಎನ್ನುತ್ತಾ, ನಿಮಾನ್ಸ್‌ನಲ್ಲಿ ಮಾಡಿದ ಪರೀಕ್ಷಾ ರಿಪೋರ್ಟ್‌ಗಳನ್ನು ನನಗೆ ಕೊಟ್ಟಳು.

ಪದ್ಮಮ್ಮನ ಸಿಟಿ ಸ್ಕ್ಯಾನ್‌ನಿಂದ ಮೆದುಳಿನಲ್ಲಿ ಗಡ್ಡೆ ಪತ್ತೆಯಾಗಿತ್ತು. ಅದು ಟಿ.ಬಿ ಕಾಯಿಲೆಯಿಂದ ಆದ ಟ್ಯೂಬರ್ ಕ್ಯುಲೋಮಾ ಎಂಬ ಗಡ್ಡೆಯಾಗಿತ್ತು. ಸಿ.ಎಸ್.ಎಫ್ ಪರೀಕ್ಷೆಯಿಂದ ಮೆದುಳಿನ ಟಿ.ಬಿ ಎಂಬುದು ದೃಢವಾಗಿತ್ತು. ಟ್ಯೂಬರ್ ಕ್ಯುಲೋಮ ಗಡ್ಡೆ ಮೆದುಳಿನಲ್ಲಿ ಒತ್ತಡವನ್ನು ಉಂಟು ಮಾಡಿ ಫಿಟ್ಸ್ ಕಾಣಿಸಿಕೊಂಡಿತು. ಇದು ಮೆದುಳಿನ ಟಿ.ಬಿಯ ಒಂದು ಅಪರೂಪದ ವಿಧವಾಗಿದೆ. ಈ ಟಿ.ಬಿ ಕಾಯಿಲೆಗೆ ಉಳಿದ ಅಂಗಗಳಿಗಾದ ಕಾಯಿಲೆಗಿಂತ ಹೆಚ್ಚು ಕಾಲ ಮಾತ್ರೆಯನ್ನು ಸೇವಿಸಬೇಕಾಗುತ್ತದೆ. ಹಾಗೆ ಫಿಟ್ಸ್ ಬರದಂತಿರಲು ಬೇರೆ ಮಾತ್ರೆಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಪದ್ಮಮ್ಮನಿಗೆ ಗಂಭೀರವಾದ ಮೆದುಳಿನ ಟಿ.ಬಿ ಕಾಯಿಲೆಯಾದರೂ ಜ್ವರವೇ ಕಾಣಿಸಿಕೊಳ್ಳಲಿಲ್ಲ. ಬ್ಯಾಕ್ಟೀರಿಯಾ ರಕ್ತದ ಮೂಲಕ ಮೆದುಳನ್ನು ಸೇರಿ ಅಲ್ಲಿಯೇ ಕಾರ್ಯಪ್ರವರ್ತವಾಯಿತು. ಹಾಗಾಗಿ ಯಾವೊಂದು ದೊಡ್ಡ ಸುಳಿವನ್ನು ನೀಡದೆ ರೋಗ ಬೆಳೆಯಿತು. ಪದ್ಮಮ್ಮ ವರ್ಷಗಳ ಕಾಲ ಮಾತ್ರೆಯನ್ನು ಸೇವಿಸಿ ಗುಣಮುಖರಾದರು.

ಸುಮಾರು 35 ವರ್ಷದ ಮಾಲತಿ ನನ್ನ ಕ್ಲಿನಿಕ್ಕಿಗೆ ಕಾಯಮ್ಮಾಗಿ ಬರುವವಳು. ಮೊದಲು ನನ್ನ ಕ್ಲಿನಿಕ್ ಪಕ್ಕದಲ್ಲಿಯೇ ಅವಳ ಮನೆ ಇತ್ತು. ಈಗ ಮನೆ ಬದಲಾಯಿಸಿಕೊಂಡು, ಹತ್ತು ಹನ್ನೆರಡು ಕಿಲೋಮೀಟರ್ ದೂರದಲ್ಲಿದ್ದರೂ ಚಿಕಿತ್ಸೆಗಾಗಿ ನನ್ನಲ್ಲಿಯೇ ಬರುತ್ತಿದ್ದಳು. ಕೆಲವರಿಗೆ ಅವರು ನಂಬಿದ ವೈದ್ಯರೇ ಚಿಕಿತ್ಸೆಯನ್ನು ಮಾಡಬೇಕು, ಇಲ್ಲದಿದ್ದರೆ ರೋಗ ಗುಣವಾದರೂ ಸಮಾಧಾನವನ್ನು ಹೊಂದಲಾರರು.

ಈ ಬಾರಿ ಬಂದ ಮಾಲತಿಯ ಮುಖದಲ್ಲಿ ಕನ್ನಡಕವಿತ್ತು. 'ಇಷ್ಟು ಚಿಕ್ಕ ವಯಸ್ಸಿನಲ್ಲಿ ದೃಷ್ಟಿ ಕಡಿಮೆಯಾಯಿತೆ? ಎಂದು ವಿಚಾರಿಸಿದೆ. ಆಗ 'ಡಾಕ್ಟ್ರೇ ಸುಮಾರು ಒಂದುವರೆ ತಿಂಗಳಿಂದ ತಲೆನೋವು ಬರುತ್ತಿತ್ತು. ಮನೆಯ ಪಕ್ಕದಲ್ಲಿರುವ ಡಾಕ್ಟರು ಅದು ಮೈಗ್ರೇನ್ ಎಂದು, ಮಾತ್ರೆಯನ್ನು ಬರೆದುಕೊಟ್ಟರು. ಅದರಿಂದ ಗುಣವಾಗದಿದ್ದಾಗ, ಕಣ್ಣಿನ ಡಾಕ್ಟರ್ ಹತ್ತಿರ ತೋರಿಸುವಂತೆ ಹೇಳಿದರು. ಕಣ್ಣಿನ ಆಸ್ಪತ್ರೆಯಲ್ಲಿ ಈ ಕನ್ನಡಕವನ್ನು ಕೊಟ್ಟರು. ಆದರೆ ಇದರಿಂದಲೂ ತಲೆನೋವು ಕಡಿಮೆ ಆಗಲಿಲ್ಲ. ಈಗ ಒಂದು ವಾರದಿಂದ ಸಂಜೆಯಾದೊಡನೆ ಸ್ವಲ್ಪ ಚಳಿ ಜ್ವರ ಬರುತ್ತಿದೆ. ಹಾಗೆಂದು ದೊಡ್ಡ ಜ್ವರ ಏನಲ್ಲ. ಅದಕ್ಕೆ ಒಂದು ಬಾರಿ ನಿಮ್ಮಲ್ಲಿಗೆ ಬಂದು ತಪಾಸಣೆಯನ್ನು ಮಾಡಿಸಿಕೊಳ್ಳೋಣ

ಎಂದು ಬಂದಿದ್ದೇನೆ ಎಂದಳು.

ಮಾಲತಿಯನ್ನು ಪರೀಕ್ಷಿಸಿದಾಗ ಕಾರಣವೇನು ತಿಳಿಯಲಿಲ್ಲ. ಮೈಗ್ರೇನೇ ಇರಬಹುದು. ಅದು ಸುಲಭದಲ್ಲಿ ಹತೋಟಿಗೆ ಬರುವ ಕಾಯಿಲೆ ಅಲ್ಲ. ಎಂದು ಸಂಶಯ ಪಟ್ಟೆ. ಹಾಗೆ ಪರೀಕ್ಷೆ ಮಾಡುತ್ತಾ ತಲೆಯನ್ನು ಬಾಗಿಸಿದಾಗ ಕುತ್ತಿಗೆಯ ಭಾಗದಲ್ಲಿ ಸ್ವಲ್ಪ ರೆಜಿಡಿಟಿ (Neck Rigidity) ಕಾಣಿಸಿತು. ಹೇಗೂ ಇರಲಿ, ಒಮ್ಮೆ ನಿಮಾನ್ಸ್‌ಗೆ  ಕಳುಹಿಸಿ ನ್ಯೂರೋಲಾಜಿಸ್ಟರ ಅಭಿಪ್ರಾಯವನ್ನು ತೆಗೆದುಕೊಳ್ಳುವುದು ಒಳಿತೆಂದು ನಿಶ್ಚಯಿಸಿದೆ. ಮಾಲತಿಗೂ ತಿಳಿಸಿ ರೆಫರೆನ್ಸ್ ಲೆಟರ್ ಬರೆದುಕೊಟ್ಟೆ.

ಎರಡು ದಿನಗಳ ನಂತರ ನಿಮಾನ್ಸ್‌ನಲ್ಲಿ ನಡೆಸಿದ ಟೆಸ್ಟ್ ರಿಪೋರ್ಟ್‌-ಗಳನ್ನು ಮಾಲತಿ ತೆಗೆದುಕೊಂಡು ಬಂದಳು ಅಲ್ಲಿ ಆಕೆಗೆ ಮೆದುಳಿಗೆ ಸಂಬಂಧಿಸಿದ ಕೆಲವು ಪರೀಕ್ಷೆಗಳನ್ನು ಮಾಡಿದ್ದರು ಒಂದು ಸಿಟಿ ಸ್ಕ್ಯಾನ್ ಅದರ ರಿಪೋರ್ಟಿನಲ್ಲಿ ಮೆದುಳಿನಲ್ಲಿ ಟಿ.ಬಿಯ ಇನ್ಫೆಕ್ಷನ್ ಇರುವ ಲಕ್ಷಣ ಕಾಣಿಸಿತು (ಟಿ.ಬಿ ಮೆನಿಂಜೈಟಿಸ್ (T.B Meningitis) ಟಿ.ಬಿ.ಇಂದ ಆಗುವ ಮೆದುಳಿನ ಜ್ವರ) ಇದರ ಜೊತೆಗೆ ಬೆನ್ನುಹುರಿಯ ದ್ರವದ ಪರೀಕ್ಷೆಯನ್ನು ಮಾಡಿದ್ದರು. ಅದರಲ್ಲೂ ಕೂಡ ಟಿಬಿ ಮೆನಿಂಜೈಟಿಸ್ ದೃಢಪಟ್ಟಿತ್ತು. ಒಂದು ವರ್ಷಗಳ ಕಾಲ ಮೆಡಿಸಿನ್ ತೆಗೆದುಕೊಳ್ಳುವಂತೆ, ಹಾಗೂ ನನ್ನಲ್ಲಿ ತಪಾಸಣೆಗೆ ಹೋಗುವಂತೆ ಸೂಚಿಸಿ ಕಳುಹಿಸಿದ್ದರು. ಚೆನ್ನಾಗಿ ಓಡಾಡಿಕೊಂಡಿದ್ದ ಮಹಿಳೆಗೆ ಈ ರೀತಿಯ ಭೀಕರವಾದ ಕಾಯಿಲೆ ಇದೆ ಎಂದು ಊಹಿಸುವುದಾದರೂ ಹೇಗೆ! ಮಾಲತಿಯ ಯೋಗ ಚೆನ್ನಾಗಿತ್ತು. ಬೇಗ ರೋಗದ ಪರೀಕ್ಷೆಯು ಆಯಿತು.

ಒಂದು ತಿಂಗಳ ನಂತರ ಮಾಲತಿ ಚಿಕಿತ್ಸೆಗಾಗಿ ಪತಿಯೊಂದಿಗೆ ಬಂದಿದ್ದಳು. ತಿಂಗಳೊಳಗೆ ತಲೆನೋವೆಲ್ಲಾ ಕಡಿಮೆಯಾಗಿ ಮಾಲತಿ ಗೆಲುವಾಗಿದ್ದಳು. ಮಾಲತಿಯ ಗಂಡ ಪುಟ್ಟಪ್ಪ 'ಡಾಕ್ಟ್ರೇ! ನೀವು ಸಮಯಕ್ಕೆ ಸರಿಯಾಗಿ ನಮ್ಮನ್ನು ನಿಮಾನ್ಸ್‌ಗೆ ಕಳುಹಿಸಿದಿರಿ. ಇಲ್ಲದಿದ್ದರೆ ನಮ್ಮ ಮಾಲತಿಗೆ ಬಹಳ ದೊಡ್ಡ ಅಪಾಯವೇ ಕಾದಿತ್ತು. ಆಕೆಯ ಅಜ್ಜಿಯೂ ಟಿ.ಬಿಯಿಂದಲೇ ತೀರಿಹೋಗಿದ್ದಾರೆ' ಎಂದು ಕೃತಜ್ಞತೆಯಿಂದ ಹೇಳಿದ. ನನಗೆ ಮಾಲತಿಗೆ ತಗಲಿದ ಸೋಂಕಿನ ಮೂಲ ತಿಳಿಯಿತು. ಅಜ್ಜಿಯಿಂದ ಅಂಟಿದ ಟಿಬಿ ಬ್ಯಾಕ್ಟೀರಿಯಾ ದೇಹದಲ್ಲಿ ಬಹಳ ಕಾಲ ಸುಪ್ತವಾಗಿ ಇತ್ತು. ಅವಳ ರೋಗ ನಿರೋಧಕ ಶಕ್ತಿ ಕಡಿಮೆಯಾದಂತೆ, ಬ್ಯಾಕ್ಟೀರಿಯಾ ತನ್ನ ಕಾರ್ಯವೈಖರಿಯನ್ನು ಪ್ರಾರಂಭಿಸಿ, ರೋಗವನ್ನು ಉಲ್ಬಣಗೊಳ್ಳುವಂತೆ ಮಾಡಿತ್ತು. ಒಂದು ವರ್ಷಗಳ ಕಾಲ ಔಷದೋಪಚಾರದಿಂದ ಮಾಲತಿ ಸಂಪೂರ್ಣ ಗುಣ ಹೊಂದಿದಳು.

ಕುಮಾರ ಎನ್ನುವ ವ್ಯಕ್ತಿ ನನ್ನಲ್ಲಿಗೆ ಚಿಕಿತ್ಸೆಗಾಗಿ ಬರುತ್ತಿದ್ದ. ಆತ ಕಟ್ಟಡ ಕಾಮಗಾರಿ ಕೆಲಸವನ್ನು ಮಾಡುತ್ತಿದ್ದ. ಆ ಕೆಲಸಕ್ಕೆ ತನ್ನ ಊರಾದ

ತಮಿಳುನಾಡಿನಿಂದಲೇ ಜನರನ್ನು ಕರೆತರುತ್ತಿದ್ದ. ಒಂದು ದಿನ ಬೆಳಿಗ್ಗೆ ಸುಮಾರು 18 ವರ್ಷದ ಪಳನಿ ಎಂಬ ಹುಡುಗನನ್ನು ಕರೆದುಕೊಂಡು ಕುಮಾರ ನನ್ನಲ್ಲಿಗೆ ಬಂದಿದ್ದ. ಈ ಪಳನಿ ಎಂಬವನು ತಮಿಳುನಾಡಿನಿಂದ ಕೆಲಸಕ್ಕೆಂದು ಕುಮಾರನಲ್ಲಿಗೆ ಬಂದವನಾಗಿದ್ದ. ಮೂರ್ನಾಲ್ಕು ದಿನಗಳಿಂದ ಜ್ವರ ಬಂದಿದೆ ಎಂದು ಕುಮಾರ ಅವನನ್ನು ಕರೆತಂದಿದ್ದ.

ಪಳನಿಯ ಜ್ವರದ ಹಿಸ್ಟರಿ ಹೀಗಿತ್ತು. ಆತನಿಗೆ ಊರಿನಲ್ಲಿಯೇ ಜ್ವರ ಪ್ರಾರಂಭವಾಗಿ, ಆಸ್ಪತ್ರೆಯ ಒಳರೋಗಿಯಾಗಿ ಸೇರಿದ್ದನಂತೆ. ಟೈಫೈಡ್ ಎಂದು ಔಷದ ನೀಡಿದ್ದರು. ಹುಷಾರಾಗಿ ಇಲ್ಲಿಗೆ ಬಂದ. ಇಲ್ಲಿಯೂ ನಾಲ್ಕೈದು ದಿನ ಚೆನ್ನಾಗಿಯೇ ಇದ್ದ. ಆದರೆ ಈಗ ಪುನಃ ಪಳನಿಗೆ ಜ್ವರ ಕಾಣಿಸಿಕೊಂಡಿದ್ದಲ್ಲದೆ ಬಹಳ ತಲೆನೋವು ಬರುತ್ತಿತ್ತು. ಈ ಹಿಂದೆ ಪರೀಕ್ಷಿಸಿದ ಯಾವೊಂದೂ ರಿಪೋರ್ಟನ್ನು ಪಳನಿ ತೆಗೆದುಕೊಂಡು ಬಂದಿರಲಿಲ್ಲ.

ಪಳನಿ ಅದಾಗಲೇ ವಿಪರೀತ ಚಳಿಯಿಂದಾಗಿ ನಡುಗುತ್ತಿದ್ದ. ಆತನ ನಡುಕವನ್ನು ನೋಡಿ ಮಲೇರಿಯಾ ಇರಬಹುದು ಅಥವಾ ಮೂತ್ರಕೋಶದ ಇನ್ಫೆಕ್ಷನ್ ಆಗಿರಬಹುದು ಎಂದು ಯೋಚಿಸಿದೆ. ಸಾಮಾನ್ಯವಾಗಿ ಈ ಎರಡೂ ಕಾಯಿಲೆಗಳಲ್ಲಿ ವಿಪರೀತ ಚಳಿಯಿಂದ ಕೂಡಿದ ಜ್ವರವಿರುತ್ತದೆ. ರಕ್ತ ಹಾಗೂ ಮೂತ್ರದ ಪರೀಕ್ಷೆಗೆ ಬರೆದು ಕೊಟ್ಟೆ. ಜ್ವರ ಹಾಗೂ ನಡುಕಕ್ಕೂ ತತ್ಕಾಲದ ಔಷಧವನ್ನು ಸೂಚಿಸಿ, ಟೆಸ್ಟ್ ರಿಪೋರ್ಟ್ ಬಂದ ನಂತರ ಮುಂದಿನ ಚಿಕಿತ್ಸೆಯನ್ನು ಪ್ರಾರಂಭಿಸೋಣ ಎಂದೆ.

ಆ ಸಂಜೆಯೇ ಪಳನಿಯನ್ನು ಕುಮಾರ ಕ್ಲಿನಿಕ್ಕಿಗೆ ಕರೆದುಕೊಂಡು ಬಂದ. ಪಳನಿಯ ಪರಿಸ್ಥಿತಿ ತುಂಬಾ ಕೆಟ್ಟಿತ್ತು. ಸ್ವಲ್ಪ ಮಂಪರಿನಲ್ಲಿದ್ದ. ಬಹುಷಃ ಮಲೇರಿಯಾದಿಂದ ಮೆದುಳಿನ ಮೇಲೆ ಪ್ರಭಾವವಾಗಿ ಈ ರೀತಿ ವರ್ತಿಸಬಹುದು ಎಂದು ಯೋಚಿಸಿದೆ. ಇದೊಂದು ಕೇವಲ ಜ್ವರವಲ್ಲದೆ ಯಾವುದೋ ಗಂಭೀರ ಕಾಯಿಲೆ ಎಂದು ಊಹಿಸಿದೆ. ಕೂಡಲೇ ನಿಮಾನ್ಸ್ ಆಸ್ಪತ್ರೆಗೆ ಕರೆದುಕೊಂಡು ಹೋಗುವಂತೆ ರೆಫರೆನ್ಸ್ ಲೆಟರ್ ಬರೆದು ಕಳುಹಿಸಿದೆ.

ಎರಡು ದಿನಗಳ ನಂತರ ನಿಮಾನ್ಸ್ ರಿಪೋರ್ಟ್‌ನೊಂದಿಗೆ ಕುಮಾರ ನನ್ನ ಕ್ಲಿನಿಕ್ಕಿಗೆ ಬಂದಿದ್ದ. ಅಲ್ಲಿ ಪಳನಿಯನ್ನು ಅಡ್ಮಿಟ್ ಮಾಡಿಕೊಂಡು, ಎಲ್ಲಾ ತರದ ಪರೀಕ್ಷೆಯನ್ನು (ತಲೆಯ ಸಿಟಿ ಸ್ಕ್ಯಾನ್, ಬೆನ್ನುಹುರಿಯ ದ್ರವದ ಪರೀಕ್ಷೆ, ರಕ್ತ ಪರೀಕ್ಷೆ) ಮಾಡಿದ್ದರು. ರಿಪೋರ್ಟಿನಂತೆ ಪಳನಿಗೆ ಟಿ.ಬಿ ಮೆನಿಂಜೈಟಿಸ್ ಕಾಯಿಲೆ ಎನ್ನುವುದು ಖಾತ್ರಿಯಾಗಿತ್ತು. ಆ ಆಸ್ಪತ್ರೆಯ ಡಾಕ್ಟರು ಟಿ.ಬಿಗೆ ಸಂಬಂಧಿಸಿದ ಎಲ್ಲಾ ಔಷಧಗಳನ್ನು ಬರೆದಿದ್ದರು. ನಿಮಾನ್ಸ್ ಅಲ್ಲಿ ಹಾಸಿಗೆಯ ಕೊರತೆ ಇರುವುದರಿಂದ, ಮನೆಯ ಹತ್ತಿರದ ಯಾವುದಾದರೂ ಆಸ್ಪತ್ರೆಗೆ ಅಡ್ಮಿಟ್ ಮಾಡುವಂತೆ ತಿಳಿಸಿದರು. ಕುಮಾರ ಈ ಎಲ್ಲ ವ್ಯವಸ್ಥೆಯನ್ನು ಮಾಡಿದ್ದ.

ನನಗೆ ಪಳನಿಯ ವಿಷಯದಲ್ಲಿ ಒಂದು ಸಂದೇಹ ಕಾಡಿ ನಿರಂತರ ಚಿಂತಿಸಿದಾಗ ಉತ್ತರ ದೊರೆಯಿತು. ಪಳನಿಗೆ ಊರಿನಲ್ಲಿ ಟೈಫಾಯ್ಡ್ ಎಂದು ಚಿಕಿತ್ಸೆಯನ್ನು ಕೊಟ್ಟಿದ್ದರು. ಈ ಚಿಕಿತ್ಸೆಯಲ್ಲಿ ಆತನಿಗೆ ಜ್ವರವು ಶಮನವಾಗಿತ್ತು. ಪಳನಿಗೆ ಟಿ ಬಿ ಮೆನಿಂಜೈಟಿಸ್ ಆದರೆ ಟೈಫೈಡ್ ಔಷಧಿಯಿಂದ ರೋಗ ಕಡಿಮೆಯಾದದ್ದು ಹೇಗೆ? ಅಷ್ಟೇ ಅಲ್ಲದೆ ಅಲ್ಲಿ ಮಾಡಿಸಿದ ರಕ್ತ ಪರೀಕ್ಷೆಯಲ್ಲಿ ಟೈಫಾಯ್ಡ್ ಎಂದು ಹೇಗೆ ಬಂತು? ಎಂಬುದು ನನ್ನ ಸಂಶಯವಾಗಿತ್ತು!!

ಟಿ.ಬಿ ರೋಗಿಗಳಲ್ಲಿ ಕೆಲವೊಮ್ಮೆ ಟೈಫಾಯ್ಡ್ ಆಗಿ ವೈಡಲ್ ಎಂಬ ರಕ್ತ ಪರೀಕ್ಷೆಯನ್ನು ಮಾಡಿದಾಗ ಪಾಸಿಟಿವ್ ಬರುವ ಸಂಭವವಿರುತ್ತದೆ. (ಇದು ನನ್ನ ವೃತ್ತಿ ಅನುಭವದಿಂದ ದೃಢಪಟ್ಟ ವಿಚಾರವಾಗಿದೆ)

ಇದರಿಂದ ಟೈಫಾಯ್ಡ್ ಎಂದು ತಿಳಿದು ಆ ವೈದ್ಯರು ಸಿಂಪ್ರೋಕ್ಸ್ ಎಂಬ ಇಂಜೆಕ್ಷನ್ನನ್ನು ಗ್ಲುಕೋಸ್ನೊಟ್ಟಿಗೆ ಕೊಟ್ಟಿರಬಹುದು. ಈ ಸಿಂಪ್ರೋಕ್ಸ ಟಿ.ಬಿಗೆ ಕೊಡುವ (second line drug) ಔಷಧವು ಆಗಿರುತ್ತದೆ. ಹಾಗಾಗಿ ನಾಲ್ಕಾರು ದಿನ ಪಳನಿಗೆ ಜ್ವರವು ಶಮನವಾಗಿತ್ತು. ಸಕಾಲದಲ್ಲಿ ರೋಗವು ಪತ್ತೆಯಾಗಿ ಚಿಕಿತ್ಸೆ ದೊರೆತ ಕಾರಣ ಪಳನಿ ಸಂಪೂರ್ಣ ಗುಣ ಹೊಂದಿದ.

ಈ ಮೂರೂ ರೋಗಿಗಳಿಗೂ ಆದ ರೋಗ ಒಂದೆ. ಕಾಣಿಸಿಕೊಂಡ ಲಕ್ಷಣಗಳು ಬೇರೆ ಬೇರೆ! ಇಂತಹ ಸಂದರ್ಭದಲ್ಲಿ ರೋಗ ನಿರ್ಣಯ ವೈದ್ಯರಿಗೆ ಸವಾಲಾಗುವುದಲ್ಲದೆ, ಬಹುಬೇಗ ನಿರ್ಣಯವನ್ನು ತೆಗೆದುಕೊಳ್ಳುವ ಅನಿವಾರ್ಯತೆಯು ಇರುತ್ತದೆ. ವಿಳಂಬವಾದರೆ ರೋಗಿಗೆ ತೀವ್ರವಾದ ಅಪಾಯವಾಗುವ ಸಾಧ್ಯತೆ ಇದೆ.

ಇಂತಹ ಸಂದರ್ಭದಲ್ಲಿ ಸರ್ಕಾರಿ ಆಸ್ಪತ್ರೆಯಾದ ನಿಮಾನ್ಸ್ ಪಾತ್ರವನ್ನು ಪ್ರಶಂಸಿಸಲೇಬೇಕು. ಅತಿ ಕಡಿಮೆ ವೆಚ್ಚದಲ್ಲಿ ಇಂತಹ ಸಂಕೀರ್ಣ ರೋಗದ ಪರೀಕ್ಷೆಯನ್ನು ಕ್ಷಿಪ್ರವಾಗಿ ಕೈಗೊಂಡು, ರೋಗವನ್ನು ನಿರ್ಣಯಿಸಿ, ಮುಂದಿನ ಚಿಕಿತ್ಸೆಯ ಕುರಿತು ಮಾರ್ಗದರ್ಶನವನ್ನು ನೀಡಿರುತ್ತಾರೆ. ಇದು ಜನರಿಗೆ ಸರಕಾರದಿಂದ ದೊರೆಯುವ ಬಹಳ ದೊಡ್ಡ ಸಹಾಯವಾಗಿದೆ, ಸೇವೆಯಾಗಿದೆ.

# ಒಟ್ಟಿಗೆ ಎರಡು ದೋಣಿ ಪ್ರಯಾಣ

ಒಂದು ಚಿಕ್ಕ ದಿನಸಿ ಅಂಗಡಿಯನ್ನು ಇಟ್ಟುಕೊಂಡ ತಿಮ್ಮಯ್ಯ ಗೌಡರು ಬಸವೇಶ್ವರನಗರದಲ್ಲಿರುವ ನಮಗೆ ನೆರೆಮನೆಯವರು. ಸರಕಾರಿ ಕೆಲಸದಿಂದ ನಿವೃತ್ತರಾದ ಮೇಲೆ, ಸಮಯ ಕಳೆಯಲು ಇನ್ನೊಂದು ಉದ್ಯೋಗವಿರಲಿ ಎನ್ನುವ ಕಾರಣಕ್ಕೆ, ತಮ್ಮ ವಾಸದ ಮನೆಯ ಒಂದು ಕೊಠಡಿಯನ್ನು ಅಂಗಡಿಯನ್ನಾಗಿ ಪರಿವರ್ತಿಸಿದ್ದರು. ನಾವು ಕೂಡ ಸಣ್ಣಪುಟ್ಟ ಸಾಮಾನುಗಳಿಗಾಗಿ ಅವರ ಅಂಗಡಿಗೆ ಹೋಗುತ್ತಿದ್ದೆವು. ಹಾಗೆ ಅವರ ಮನೆ ವೈದ್ಯನಾಗಿ ನನ್ನನ್ನೇ ಆರಿಸಿಕೊಂಡಿದ್ದರು. ತಿಮ್ಮಯ್ಯ ಗೌಡರಿಗೆ ತುಂಬಾ ಚಿಕ್ಕವಯಸ್ಸಿನಲ್ಲಿ ಡಯಾಬಿಟಿಸ್ ಪ್ರಾರಂಭವಾಗಿತ್ತು. ಅದರಿಂದ ಮಾತ್ರೆಯ ಹತೋಟಿಗೆ ಸಿಗದ ಡಯಾಬಿಟಿಸ್‌ಗೆ ಇನ್ಸುಲಿನ್ ಇಂಜೆಕ್ಷನ್ನನ್ನೇ ತೆಗೆದುಕೊಳ್ಳುತ್ತಿದ್ದರು. ಹಾಗೆ ಗೌಡರ ಹೆಂಡತಿಗೂ ಡಯಾಬಿಟಿಸ್ ಚಿಕಿತ್ಸೆ ಪ್ರಾರಂಭವಾಗಿತ್ತು ನಾಲ್ಕು ಗಂಡು ಒಂದು ಹೆಣ್ಣು ಮಗಳುಳ್ಳ ದೊಡ್ಡ ಸಂಸಾರ ಎಂದೇ ಹೇಳಬಹುದು.

ಹಿರಿಯ ಮಗ ಉಮೇಶ ಮದುವೆಯಾಗಿ ಒಂದು ಮಗನು ಇದ್ದ ದೂರದ ಹಳ್ಳಿಯಲ್ಲಿ ಬ್ಯಾಂಕ್ ಕ್ಲರ್ಕ್ ಆಗಿ ಕೆಲಸ ಮಾಡುತ್ತಿದ್ದ ಸುಮಾರು 40 ವರ್ಷದ ಪ್ರಾಯದ ಉಮೇಶನಿಗೆ ದೇಹದ ತೂಕ ಬಹಳ ಕಡಿಮೆ ಆಯಿತು ಕಾರಣವನ್ನು ತಿಳಿಯುವುದಕ್ಕೆ ನನ್ನಲ್ಲಿಗೆ ಬಂದಿದ್ದ ತಂದೆ ತಾಯಿ ಇಬ್ಬರಿಗೂ ಡಯಾಬಿಟಿಸಿರುವುದರಿಂದ ಉಮೇಶನಿಗೂ ಆ ಕಾಯಿಲೆ ಬಂದಿರಬಹುದು ಎಂದು ಊಹಿಸಿದೆ. ಸಹಜವಾಗಿ ಡಯಾಬಿಟಿಸ್ ಪರೀಕ್ಷೆಯನ್ನು ಮಾಡಿಸಲು ಸಲಹೆ ನೀಡಿದೆ. ಟೆಸ್ಟ್ ರಿಪೋರ್ಟ್ ನನ್ನ ಊಹೆಯನ್ನು ನಿಜವೆನಿಸಿತು ಉಮೇಶನಿಗೂ ಡಯಾಬಿಟಿಸ್ ಉಂಟಾಗಿತ್ತು ಮಾತ್ರೆಗಳಿಂದ ಉಮೇಶನ ಡಯಾಬಿಟಿಸ್ ಹತೋಟಿಗೆ ಬಂತು.

ಹೀಗೆ ಕೆಲವು ದಿನಗಳು ಕಳೆದ ಮೇಲೆ, ಒಂದು ದಿನ ಬೆಳಿಗ್ಗೆ ಉಮೇಶ ನನ್ನಲ್ಲಿಗೆ ಬಂದ. "ಡಾಕ್ಟರ್ ನನಗೆ ಹತ್ತು ಹನ್ನೆರಡು ದಿನಗಳಿಂದ ಆಗಾಗ ಜ್ವರ ಬರುತ್ತಿದೆ. ಹಾಗಂತ ದೊಡ್ಡ ಜ್ವರವು ಅಲ್ಲ. ದಿನವೂ ಇರುವುದಿಲ್ಲ. ಕೆಮ್ಮು ಮಾತ್ರ ಸ್ವಲ್ಪ ಜಾಸ್ತಿ ಇದೆ. ನಾನು ನಿತ್ಯವೂ ಬಸ್ಸಿನಲ್ಲಿ ಓಡಾಡುತ್ತಿದ್ದೇನೆ. ಬಸ್ಸಿನಲ್ಲಿ ಬೀಡಿ, ಸಿಗರೇಟಿನವರು ದಮ್ಮು ಕೆಮ್ಮಿನವರು ಎಲ್ಲರೂ ಇರುತ್ತಾರೆ ಇದರಿಂದಲೇ ನನಗೂ ಕೆಮ್ಮು ಪ್ರಾರಂಭವಾಯಿತು ಎಂದು ಅಂದುಕೊಂಡು, ಹಲವಾರು ಸಿರಪ್ ಗಳನ್ನು ತೆಗೆದುಕೊಂಡೆ. ಪ್ರಯೋಜನವೇನು ಕಾಣಲಿಲ್ಲ. ನೀವೇ ಒಮ್ಮೆ

ಪರೀಕ್ಷಿಸಿ ಹೇಳಿ" ಎಂದ.

ನಾನು ಉಮೇಶನನ್ನು ಗಮನಿಸುವಾಗಲೇ ಹೆಚ್ಚಾಗಿಯೇ ತೂಕವನ್ನು ಕಳೆದುಕೊಂಡಿದ್ದಾನೆ ಎಂದು ಅನಿಸಿತು ಪರೀಕ್ಷಿಸುವಾಗ ಶ್ವಾಸಕೋಶದ ಇನ್ಫೆಕ್ಷನ್ ಗಂಭೀರವಾಗಿಯೇ ಇರುವಂತೆ ಕಂಡಿತು ಇದು ಉಮೇಶನಿಗೆ ಶ್ವಾಸಕೋಶದ ಕ್ಷಯವೇ ಎಂದು ನನಗೆ ಖಾತ್ರಿಯಾಯಿತು. ಕೂಡಲೇ ಎದೆಯ ಎಕ್ಸರೇ, ರಕ್ತದ ಪರೀಕ್ಷೆ, ಕಫದ ಪರೀಕ್ಷೆ ಹಾಗೆ ರಕ್ತದ ಸಕ್ಕರೆಯ ಪ್ರಮಾಣವನ್ನು ಪರೀಕ್ಷಿಸಲು ತಿಳಿಸಿ ಬರೆದುಕೊಟ್ಟೆ

ಉಮೇಶ ಮರುದಿನವೇ ಎಲ್ಲಾ ರಿಪೋರ್ಟ್‌ನೊಂದಿಗೆ ಬಂದಿದ್ದ ಈಗಲೂ ನನ್ನ ಊಹೆ ನಿಜವಾಗಿತ್ತು ಎರಡು ಶ್ವಾಸಕೋಶಗಳಿಗೆ ಕ್ಷಯರೋಗ ಹರಡಿತ್ತು ರಕ್ತದಲ್ಲಿನ ಸಕ್ಕರೆ ಪ್ರಮಾಣವು ಹೆಚ್ಚಾಗಿತ್ತು

ಸಕ್ಕರೆ ಕಾಯಿಲೆ ಇರುವವರಿಗೆ ರೋಗ ನಿರೋಧಕ ಶಕ್ತಿ ಕಡಿಮೆ ಇರುವುದರಿಂದ, ಕ್ಷಯ ರೋಗವು ಬಹುಬೇಗ ಅಂಟಿಕೊಳ್ಳುತ್ತದೆ. ಹಾಗಾಗಿ ಕ್ಷಯ ರೋಗಿ ಎಂದು ಗೊತ್ತಾದ ತಕ್ಷಣ ಡಯಾಬಿಟಿಸನ್ನು ಪರೀಕ್ಷಿಸುವುದು ವೈದ್ಯಕೀಯ ಕ್ರಮ. ಕ್ಷಯಕ್ಕೂ ಡಯಾಬಿಟಿಸಿಗೂ ಒಂದು ತರದ ವಿಚಿತ್ರ ಸಂಬಂಧ. ಡಯಾಬಿಟಿಸ್ ಇದ್ದರೆ ಕ್ಷಯ ಬೇಗ ತಗಲುತ್ತದೆ. ಕ್ಷಯ ಬಂದಾಗ ಡಯಾಬಿಟಿಸ್ ಹೆಚ್ಚಾಗುತ್ತದೆ. ಉಮೇಶ ಹೇಳಿದಂತೆ ಬಸ್ಸಿನಲ್ಲಿ ಓಡಾಡುವಾಗ ಯಾವುದೋ ಕ್ಷಯ ರೋಗಿಯಿಂದ ಈತನಿಗೆ ರೋಗ ಅಂಟಿರಬಹುದು.

ಕೂಡಲೇ ಉಮೇಶನ ತಂದೆ ತಿಮ್ಮಯ್ಯ ಗೌಡರನ್ನು ಕರೆಸಿ ಮಗನ ಆರೋಗ್ಯ ಪರಿಸ್ಥಿತಿಯನ್ನು ವಿವರಿಸಿದೆ ಅವರು ಸಹಜವಾಗಿಯೇ ಕೂಡಲೇ ಚಿಕಿತ್ಸೆಯನ್ನು ಪ್ರಾರಂಭಿಸುವಂತೆ ವಿನಂತಿಸಿಕೊಂಡರು.

ಈ ಕ್ಷಯ ರೋಗಕ್ಕೆ ನಿತ್ಯವೂ ನಾಲ್ಕು ಔಷಧಿಗಳನ್ನು ಒಟ್ಟಿಗೆ ತೆಗೆದುಕೊಳ್ಳಬೇಕು ಐಸೋನೆಕ್ಸ್, ರಿಫಾಂಪಸಿನ್, ಇತಂಬುಟಾಲ್, ಪೈರಜಿನವೈಡ್ ಈ ಔಷಧಿಗಳು ಲಿವರಿನ ಮೇಲೆ ಪರಿಣಾಮ ಬೀಳುವುದು ಹಾಗಾಗಿ ಉಮೇಶನ ಲಿವರ್ ಫಂಕ್ಷನ್ ಟೆಸ್ಟ್ ಅನ್ನು ಮಾಡಿಸಿದ್ದಾಯಿತು

ಇನ್ನೊಂದು ರೋಗವಾದ ಡಯಾಬಿಟಿಸನ್ನು ನಿಯಂತ್ರಣದಲ್ಲಿ ಇಡಬೇಕಿತ್ತು. ಬೇಗ ಡಯಾಬಿಟಿಸನ್ನು ನಿಯಂತ್ರಣಕ್ಕೆ ತರಲು ಇನ್ಸುಲಿನ್ ಕೊಡೋಣ ಎಂದರೆ ಉಮೇಶ ಆ ಇಂಜೆಕ್ಷನ್‌ಗೆ ಸಿದ್ದ ಇರಲಿಲ್ಲ ಹಾಗಾಗಿ ಅದರ ಮಾತ್ರೆಗಳನ್ನು ಬದಲಿಸಿ ಬರೆದು ಕೊಟ್ಟೆ ಆಶ್ಚರ್ಯವೆಂಬಂತೆ ಒಂದೇ ವಾರಕ್ಕೆ ಡಯಾಬಿಟಿಸ್ ಹತೋಟಿಗೆ ಬಂದದ್ದಲ್ಲದೆ ಹತ್ತೇ ದಿನಗಳಲ್ಲಿ ಜ್ವರ ಕೆಮ್ಮು ಕೂಡ ಕಡಿಮೆಯಾಗಿತ್ತು.

ಚಿಕಿತ್ಸೆ ಪ್ರಾರಂಭವಾಗಿ ತಿಂಗಳಾದ ನಂತರ ಉಮೇಶ ಮತ್ತೊಮ್ಮೆ ನನ್ನಲ್ಲಿ ತಪಾಸಣೆಗಾಗಿ ಬಂದಿದ್ದ ಆತನ ತೂಕ ಒಂದೇ ತಿಂಗಳಲ್ಲಿ ಗಣನೀಯವಾಗಿ

ಏರಿಕೆಯಾಗಿ 42 ಕೆಜಿಯಿಂದ 51 ಕೆಜಿಗೆ ಜಿಗಿದಿದ್ದ. ಬಹಳ ಸಂತೋಷವನ್ನು ಪಡುತ್ತಿದ್ದ ಕ್ಷಯ ರೋಗಿಗಳಲ್ಲಿ ದೇಹದ ತೂಕದ ಏರಿಕೆ ರೋಗ ನಿಯಂತ್ರಣದ ಲಕ್ಷಣವಾಗಿದೆ. ಹಿಂದಿನ ಬಾರಿ ರಕ್ತದಲ್ಲಿ ಹಿಮೋಗ್ಲೋಬಿನ್ ಬಹಳ ಕಡಿಮೆ ಇತ್ತು ಹಾಗಾಗಿ ಇನ್ನೊಮ್ಮೆ ಪರೀಕ್ಷಿಸುವಂತೆ ಹೇಳಿದೆ. ಕೆಮ್ಮುವಾಗ ರೋಗಾಣುಗಳು ಬೇರೆಯವರಿಗೆ ಹರಡಬಹುದು ಹಾಗಾಗಿ ಬಾಯಿಗೆ ಕರವಸ್ತ್ರವನ್ನು ಇಟ್ಟುಕೊಂಡೆ ಕೆಮ್ಮುವಂತೆ ಹೇಳಿದೆ ರೋಗಿಗಳು ಸಾಮಾಜಿಕ ಸ್ವಾಸ್ಥ್ಯಕ್ಕೆ ಈ ರೀತಿಯಾಗಿ ಜಾಗರೂಕರಾಗಿರಬೇಕು.

ಉಮೇಶ ಮರುದಿನವೇ ರಕ್ತ ಪರೀಕ್ಷೆಯ ರಿಪೋರ್ಟ್‌ನೊಂದಿಗೆ ಬಂದಿದ್ದ ಆದರೆ ಈ ಬಾರಿ ಆಶ್ಚರ್ಯ ಆಘಾತಗಳು ಕಾದಿತ್ತು ರಕ್ತದ ರಿಪೋರ್ಟಿನ ಪ್ರಕಾರ ಬಿಳಿ ರಕ್ತ ಕಣಗಳ ಸಂಖ್ಯೆ ಬಹಳ ಜಾಸ್ತಿಯಾಗಿತ್ತು ಸಹಜವಾಗಿ 4ಸಾವಿರದಿಂದ 11 ಸಾವಿರದವರೆಗೆ ಇರಬೇಕಾದ ಬಿಳಿ ರಕ್ತ ಕಣ ಒಂದು ಮೈಕ್ರೋ ಲೀಟರ್‌ಗೆ 18 ಸಾವಿರದಷ್ಟು ಇತ್ತು. ಈ ಐದು ವಿಧದ ಬಿಳಿ ರಕ್ತ ಕಣಗಳಲ್ಲಿ 70% ನಷ್ಟು ಲಿಂಫೋಸೈಟ್ ವಿಧದ ರಕ್ತಕಣವೆ ಇತ್ತು. ಈ ರಿಪೋರ್ಟ್ ಅನ್ನು ವಿವರಿಸುತ್ತಾ ಇದು ಕ್ರೋನಿಕ್ ಲಿಂಫೋಸೈಟಿಕ್ ಲ್ಯುಕೆಮಿಯಾ ಎಂದು ಬರೆದಿದ್ದರು. ಅಂದರೆ ಇದು ನಿಧಾನವಾಗಿ ಉಲ್ಬಣಗೊಳ್ಳುವ ಒಂದು ತರದ ರಕ್ತದ ಕ್ಯಾನ್ಸರ್ ಆಗಿತ್ತು. ನನಗೆ ಸ್ವಲ್ಪ ಸಂಶಯ ಬಂದ ಕಾರಣ ರಕ್ತ ಪರೀಕ್ಷೆಗೆ ಹೆಸರಾಗಿದ್ದ ಜಯನಗರದ ಲ್ಯಾಬೋರೇಟರಿಗೆ ಪುನಃ ಪರೀಕ್ಷೆಗೆ ಕಳುಹಿಸಿದೆ ಇದರ ಜೊತೆಯಲ್ಲಿ ರಕ್ತದ ಕ್ಯಾನ್ಸರ್ ಗೆ ಸಂಬಂಧಿಸಿದ ಇನ್ನೂ ಕೆಲವು ಪರೀಕ್ಷೆಗಳನ್ನು ಬರೆದು ಕಳುಹಿಸಿದೆ. ಒಂದೆರಡು ದಿನಗಳಲ್ಲಿ ಜಯನಗರದ ಲ್ಯಾಬೋರೇಟರಿಯ ಪರಿಚಯ ರಿಪೋರ್ಟ್ ನೊಂದಿಗೆ ಬಂದ ಉಮೇಶ "ಡಾಕ್ಟ್ರೇ! ರಾಜ ಕಾಯಿಲೆಗಳೆಲ್ಲ ನನ್ನ ಬೆನ್ನು ಬಿದ್ದಿರುವಂತೆ ಕಾಣುತ್ತದೆ" ಎಂದು ಬೇಸರದಿಂದ ಹೇಳಿದ. ಆ ಮಾತಿನಲ್ಲಿ ಸತ್ಯವಿತ್ತು.

ಉಮೇಶನ ತಂದೆಯನ್ನು ಕರೆಸಿ, ಚಿಕಿತ್ಸೆಯ ಬಗ್ಗೆ ಮಾತನಾಡಿದೆ. ಕೊನೆಯಲ್ಲಿ ಪ್ರಸಿದ್ಧ ಕ್ಯಾನ್ಸರ್ ಆಸ್ಪತ್ರೆಗೆ ಕಳುಹಿಸುವುದೆಂದು ತೀರ್ಮಾನವಾಯಿತು. ಅದರಂತೆ ಕ್ಯಾನ್ಸರ್ ಆಸ್ಪತ್ರೆಗೆ ರೆಫರೆನ್ಸ್ ಲೆಟರನ್ನು ಬರೆದುಕೊಟ್ಟೆ. ಜೊತೆಗೆ ಉಮೇಶ ಪ್ರಸ್ತುತವಾಗಿ ಪಡೆಯುತ್ತಿದ್ದ ಕ್ಷಯದ ಟ್ರೀಟ್ಮೆಂಟಿನ ಬಗ್ಗೆಯೂ ವಿವರವಾಗಿ ಬರೆದು ಕಳುಹಿಸಿದೆ. ಕ್ಯಾನ್ಸರ್ ಆಸ್ಪತ್ರೆಯಲ್ಲಿ ಉಮೇಶನಿಗೆ ಕ್ಯಾನ್ಸರ್ ಚಿಕಿತ್ಸೆಯನ್ನು ಪ್ರಾರಂಭಿಸಿದರು.

ಕ್ಯಾನ್ಸರಗೆ ಕೊಡುವ ಚಿಕಿತ್ಸೆಯಿಂದ ಮನುಷ್ಯನ ರೋಗನಿರೋಧಕ ಶಕ್ತಿ ಕಡಿಮೆಯಾಗುತ್ತದೆ. ಅಂದರೆ ರೋಗಕಾರಕ ಬ್ಯಾಕ್ಟೀರಿಯಾವನ್ನು ಎದುರಿಸುವ, ಬಿಳಿ ರಕ್ತ ಕಣದ ಮೇಲೆ ಕ್ಯಾನ್ಸರ್‌ಗೆ ಕೊಡುವ ಚಿಕಿತ್ಸೆ ಪರಿಣಾಮವನ್ನು ಬೀರುತ್ತದೆ. ಇದರಿಂದ ಹದಿನೈದು ದಿನಗಳಲ್ಲಿ ಉಮೇಶನ ಜ್ವರ ಕೆಮ್ಮು ಮರುಕಳಿಸಿತ್ತು. ತಿಮ್ಮಯ್ಯ ಗೌಡರು ಕಂಗಾಲಾಗಿ ನನ್ನಲ್ಲಿಗೆ ಬಂದರು. "ಡಾಕ್ಟ್ರೇ!

ನಿಮ್ಮಿಂದ ಜ್ವರ ಕೆಮ್ಮು ಗುಣವಾಗಿತ್ತು, ಆದರೆ ಈಗ ಪುನಃ ಪ್ರಾರಂಭವಾಗಿದೆ. ಏನು ಮಾಡಲಿ?! ಪ್ರಸಿದ್ಧ ಕ್ಷಯರೋಗ ಆಸ್ಪತ್ರೆಗೆ ಒಮ್ಮೆ ತೋರಿಸಲೇ? ಎಂದು ಕೇಳಿದರು. ನನಗೂ ಬೇರೆ ದಾರಿ ಕಾಣಲಿಲ್ಲ. ನಾನು' ಸರಿ ತೋರಿಸಿ' ಎಂದು, ಅಲ್ಲಿ ಉಮೇಶನಿಗೆ ನೀಡುತ್ತಿರುವ ಸಿ. ಎಲ್. ಎಚ್. ಚಿಕಿತ್ಸೆಯ ವಿಚಾರವನ್ನು ತಿಳಿಸಿ ಎಂದು ಹೇಳಿದೆ.

ಇದಾಗಿ ಒಂದು ವಾರಗಳ ನಂತರ ಗೌಡರಿಂದ ಉಮೇಶನ ಚಿಕಿತ್ಸಾ ಮಾಹಿತಿ ದೊರಕಿತು ಉಮೇಶ ಆಸ್ಪತ್ರೆಯ ಒಳರೋಗಿಯಾಗಿ ಸೇರಿಕೊಂಡಿದ್ದ ಅವನ ಕಫದ ಕಲ್ಚರ್ ಪರೀಕ್ಷೆ ಮಾಡಿ ನಾವು ಈಗ ಕೊಡುತ್ತಿರುವ ಮಾತ್ರೆ ರೋಗದ ವಿರುದ್ಧ ಕೆಲಸ ಮಾಡುತ್ತದೆಯೋ ಇಲ್ಲವೋ ಎಂದು ತಿಳಿಯುತ್ತಾರಂತೆ ಎಂದರು ಅಂದರೆ ಉಮೇಶನ ಟಿಬಿ ಕಾಯಿಲೆ ಎಂಡಿಆರ್ (ಮಲ್ಟಿ ಡ್ರಗ್ ರೆಸಿಸ್ಟೆಂಟ್) ಅಂದರೆ ಕೆಲವು ರೋಗಿಗಳಲ್ಲಿ ಟಿಬಿ ಬ್ಯಾಕ್ಟೀರಿಯಾ ಎಂ ಡಿ ಆರ್ ಆಗಿರುತ್ತದೆ ಆದರೆ ಉಮೇಶನ ವಿಷಯದಲ್ಲಿ ಹಾಗಾಗಲು ಸಾಧ್ಯವೇ ಇರಲಿಲ್ಲ ಯಾಕೆಂದರೆ ಈ ಮೊದಲಿನ ಚಿಕಿತ್ಸೆಯಲ್ಲಿ ಔಷಧೀಯ ಪರಿಣಾಮದಿಂದ ಉಮೇಶನ ಆರೋಗ್ಯದಲ್ಲಿ ಗಣನೀಯ ಸುಧಾರಣೆ ಕಂಡು ಬಂದಿತ್ತು. ಎಂಬುದು ನನ್ನ ನಿಖರವಾದ ಅಭಿಪ್ರಾಯ ಆದರೆ ಈ ವಿಚಾರವನ್ನು ತಿಮ್ಮಯ್ಯಗೌಡರಿಗೆ ತಿಳಿಸುವುದು ಹೇಗೆ ಅಥವಾ ಅನಿವಾರ್ಯತೆಯು ಇರಲಿಲ್ಲ ಹಾಗಾಗಿ ಉಮೇಶನ ಕ್ಯಾನ್ಸರ್ ವಿಷಯದ ಬಗ್ಗೆ ಹೇಳಿದ್ದೀರ ಎಂದು ವಿಚಾರಿಸಿದೆ.

ಇದಕ್ಕೆ ಗೌಡರ ಉತ್ತರವನ್ನು ಕೇಳಿ ಡಾಕ್ಟರ್ ಆದ ನಾನೇ ದಂಗಾಗಿ ಹೋದೆ! "ಸಿಎಲ್ಎಲ್ ಏನಿದ್ದರೂ ಕ್ಯಾನ್ಸರ್ ಆಸ್ಪತ್ರೆಯಲ್ಲಿ ನೋಡಿಕೊಳ್ಳುತ್ತಾರೆ. ನಾವು ಅದರ ಬಗ್ಗೆ ಯೋಚಿಸುವುದಿಲ್ಲ. ನಮ್ಮದೇನಿದ್ದರೂ ಟಿಬಿ ಕಾಯಿಲೆಯ ಚಿಕಿತ್ಸೆ!" ಎಂದರಂತೆ. ಒಂದು ಕಾಯಿಲೆಯ ರೋಗಕ್ಕೆ ಕಾರಣವಾದ ರೋಗಾಣುವಿನ ಬಗ್ಗೆ ಎಂ ಡಿ ಆರ್ ಮಾಡಿಸುವ ವೈದ್ಯರು ಒಂದೇ ರೋಗಿಯಲ್ಲಿರುವ ಇನ್ನೊಂದು ಕಾಯಿಲೆಯ ಬಗ್ಗೆ ತಮಗೆ ಸಂಬಂಧವೇ ಇಲ್ಲದ ರೀತಿಯಲ್ಲಿ ಯೋಚಿಸಿ ಚಿಕಿತ್ಸೆಯನ್ನು ನೀಡುತ್ತಿರುವುದು ವೈದ್ಯಕೀಯ ವಿಪರ್ಯಾಸ ಎಂದೇ ನನಗನಿಸುತ್ತದೆ.

ಈ ಚಿಕಿತ್ಸೆಗಳೆಲ್ಲ ನಡೆದು ಹದಿನೈದು ದಿವಸದಲ್ಲಿ ಡಿಸ್ಚಾರ್ಜ್ ಆಗಿ ಉಮೇಶ ಮನೆಗೆ ಬಂದಾಗ, ನೋಡಲು ಹೋಗಿದ್ದೆ. ಬಹಳ ಕ್ಷೀಣವಾಗಿ ಹೋಗಿದ್ದ. ಇಪ್ಪತ್ತು ದಿನಗಳಿಗೊಮ್ಮೆ ಕ್ಯಾನ್ಸರ್ ಆಸ್ಪತ್ರೆಗೆ ಹಾಗೆ ಹದಿನೈದರಿಂದ ರಿಂದ ಇಪ್ಪತ್ತು ದಿನಗಳಿಗೊಮ್ಮೆ ಕ್ಷಯರೋಗ ಆಸ್ಪತ್ರೆಗೆ ಹೀಗೆ ಎರಡು ಕಡೆ ತಪಾಸಣೆಗಾಗಿ ಉಮೇಶ ಹೋಗುತ್ತಿದ್ದ. ಉಮೇಶನ ತಂದೆಯವರಿಗೆ ನಾನು ಮಾಮೂಲಿ ಡಾಕ್ಟರಾಗಿದ್ದೆ. ಈಗ ನನ್ನ ಯಾವ ಮಾತು ಅವರ ಕಿವಿಯಲ್ಲಿ ಇಳಿಯುತ್ತಿರಲಿಲ್ಲ. ದೊಡ್ಡ ಆಸ್ಪತ್ರೆಯ ಡಾಕ್ಟರ್ ಗಳ ಮುಂದೆ ನನ್ನ ಮಾತು ಚಿಕ್ಕದಾಗಿತ್ತು.

ಮತ್ತೆ ಮೂರು ತಿಂಗಳಲ್ಲಿ ಉಮೇಶನ ಅಂತಿಮ ಸುದ್ದಿ ನಮಗೆ ಬಂತು. ನಲವತ್ತರ ವಯಸ್ಸಿನಲ್ಲಿ ಉಮೇಶನ ಬದುಕು ಕೊನೆಗೊಂಡಿತ್ತು.

ಉಮೇಶನ ವಿಷಯದಲ್ಲಿ ಒಂದು ಕಾಯಿಲೆಗೆ ನೀಡುವ ಚಿಕಿತ್ಸೆ ಇನ್ನೊಂದು ಕಾಯಿಲೆಯನ್ನು ಉಲ್ಬಣಿಸುವಂತೆ ಮಾಡುತ್ತಿತ್ತು. ಕ್ಯಾನ್ಸರ್ ಚಿಕಿತ್ಸೆಯಿಂದ ಕ್ಷಯ ರೋಗ ಉಲ್ಬಣವಾಗುತ್ತಿತ್ತು. ಸಹಜವಾಗಿಯೇ ಕ್ಯಾನ್ಸರಿನ ಚಿಕಿತ್ಸೆಯಿಂದ ದೇಹದಲ್ಲಿನ ರೋಗ ನಿರೋಧಕ ಶಕ್ತಿ ಕಡಿಮೆಯಾದಾಗ ಕ್ಷಯರೋಗ ಉಲ್ಬಣವಾಗುತ್ತಿತ್ತು. ಹಾಗಾಗಿ ಇಲ್ಲಿ ಕ್ಯಾನ್ಸರ್ ಚಿಕಿತ್ಸೆ ಮಾಡುವ ವೈದ್ಯರು, ಜೊತೆಗೆ ಕ್ಷಯರೋಗವನ್ನು ಚಿಕಿತ್ಸೆ ಮಾಡುವ ವೈದ್ಯರು ಉಮೇಶನ ಈ ಎರಡು ಕಾಯಿಲೆಯನ್ನುಗಮನಿಸಿಕೊಂಡು ಚಿಕಿತ್ಸೆಯನ್ನು ನೀಡಿದ್ದರೆ, ಇನ್ನೂ ಕೆಲವು ಕಾಲ ಉಮೇಶ ಬದುಕಿರುತ್ತಿದ್ದ ಎನ್ನುವುದು ನನ್ನ ಅನಿಸಿಕೆ.

ಉಮೇಶನಲ್ಲಿ ಕಾಣಿಸಿಕೊಂಡ ಸಿಎಲ್ಎಲ್ ಕ್ಯಾನ್ಸರ್ ಮೊದಲೇ ಹೇಳಿದಂತೆ ಬಹಳ ನಿಧಾನವಾಗಿ ಹರಡುವ ಕಾಯಿಲೆಯಾಗಿತ್ತು. ಹಾಗಾಗಿ ಇಂದಿನ ವೈದ್ಯಕೀಯದಲ್ಲಿ ಲಭ್ಯವಿರುವ ಉಪಚಾರಗಳಿಂದ ಟಿ.ಬಿ.ಯನ್ನು ಕೆಲವೇ ಸಮಯಗಳಲ್ಲಿ ಸಂಪೂರ್ಣವಾಗಿ ಗುಣಪಡಿಸಲು ಸಾಧ್ಯವಿತ್ತು. ಹಾಗಾಗಿ ಉಮೇಶ ಕ್ಷಯರೋಗದಿಂದ ಮುಕ್ತನಾದ ಮೇಲೆ ಕ್ಯಾನ್ಸರ್ ಚಿಕಿತ್ಸೆಯನ್ನು ಪ್ರಾರಂಭಿಸಬಹುದಿತ್ತು. ಈ ವಿಷಯವನ್ನು ಕ್ಷಯರೋಗ ಚಿಕಿತ್ಸಕರಾಗಲಿ, ಕ್ಯಾನ್ಸರ್ ಚಿಕಿತ್ಸಕರಾಗಲಿ ಇಬ್ಬರೂ ಗಮನಿಸಲಿಲ್ಲ. ಕ್ಷಯ ರೋಗ ಚಿಕಿತ್ಸಕರು ನಮ್ಮ ಚಿಕಿತ್ಸೆ ಮುಗಿದ ಮೇಲೆ ಕ್ಯಾನ್ಸರ್ ಚಿಕಿತ್ಸೆಯನ್ನು ಮುಂದುವರಿಸಿ ಎಂಬ ಸಲಹೆಯನ್ನು ನೀಡಬಹುದಿತ್ತು. ಕ್ಯಾನ್ಸರ್ ತಜ್ಞರು ಟಿ ಬಿ ಚಿಕಿತ್ಸೆ ಮುಗಿದ ನಂತರ ಕ್ಯಾನ್ಸರ್‌ಗೆ ಚಿಕಿತ್ಸೆ ಕೊಡೋಣ ಎಂದು ರೋಗಿಗೆ ತಿಳಿಹೇಳಬಹುದಿತ್ತು. ಆದರೆ ಇಬ್ಬರೂ ಅವರವರ ನೇರಕ್ಕೆ ಚಿಕಿತ್ಸೆಯನ್ನು ಕೊಡುತ್ತಾ ಮುಂದುವರಿದರು. ಈ ರೀತಿ ತಾವು ವಿಶೇಷವಾಗಿ ಅಧ್ಯಯನ ಮಾಡಿದ ರೋಗಕ್ಕೆ ಮಾತ್ರ ಔಷಧವನ್ನು ನೀಡುವುದಕ್ಕೆ "ಕಂಪಾರ್ಟ್ಮೆಂಟ್ ಮೆಡಿಸಿನ್" ಎಂದು ಹೇಳುತ್ತಾರೆ. ಔಷಧವನ್ನು ನೀಡುವ ವಿಷಯದಲ್ಲಿ ಕಂಪಾರ್ಟ್ಮೆಂಟ್ ಮೆಡಿಸಿನ್ ಮಾಡಲಿ, ರೋಗದ ಬಗ್ಗೆ ವಿಚಾರಿಸುವಾಗ, ಯೋಚಿಸುವಾಗ ಬುದ್ಧಿಯನ್ನು ಕಂಪಾರ್ಟ್ಮೆಂಟಿನಲ್ಲಿ ಇಡಬಾರದು. ಯಾವ ಗೋಪುರದ ಮೇಲೆ ನಿಂತು ನಾನು ಇದನ್ನು ಕೂಗಿ ಹೇಳಲಿ. ನನ್ನ ಕೂಗು ತಲುಪುವ ದೂರವಾದರೂ ಎಷ್ಟು?! ಉಮೇಶನ ತಂದೆಗೆ ಈ ವಿಚಾರವನ್ನು ತಿಳಿಸುವ ಪ್ರಯತ್ನವನ್ನು ಮಾಡಿದಾಗ, ಅವರು ಈ ಸ್ಪೆಷಲಿಸ್ಟ್‌ಗಳ ಪ್ರಭಾವಕ್ಕೆ ಒಳಗಾಗಿದ್ದು ಕಂಡು ಬಂತು! ಹಾಗಾಗಿ ನೆರೆಮನೆಯ ಡಾಕ್ಟರ್ ಮಾತು ರುಚಿಸಲಿಲ್ಲ. ಉಮೇಶನ ಆಯುಷ್ಯ ರೇಖೆಯ ಅಳತೆ ನನ್ನಲ್ಲಿ ಇಲ್ಲದಿದ್ದರೂ, ಉಮೇಶನ ಕಾಯಿಲೆಗೆ ಚಿಕಿತ್ಸೆಯ ಅಳತೆಯಂತೂ ಹೀಗಿರಬೇಕಿತ್ತು.

# ರಾಜಸ್ಥಾನದ ಕಾಯಿಲೆಗೆ ಬೆಂಗಳೂರಿನಿಂದ ಚಿಕಿತ್ಸೆ

ಚರ್ಮ ಕಾಯಿಲೆಗಳಲ್ಲಿ ಶಿಲೀಂದ್ರಗಳಿಂದ ಉಂಟಾಗುವ ಕಾಯಿಲೆಗಳು ಸರ್ವೇಸಾಮಾನ್ಯವಾಗಿರುತ್ತದೆ. ಜನಸಾಮಾನ್ಯರು ಇದನ್ನು ಪಂಗಲ್ ಇನ್ಫೆಕ್ಷನ್ನೆಂದು ಕರೆಯುತ್ತಾರೆ. ಈ ಶಿಲೀಂದ್ರಗಳು ಎಲ್ಲಾ ಅಂಗಾಂಶಗಳಲ್ಲಿಯೂ ಕಾಯಿಲೆಯನ್ನು ಉಂಟುಮಾಡುತ್ತದೆಯಾದರೂ, ಚರ್ಮದಲ್ಲಿ ಈ ಕಾಯಿಲೆ ಬಹಳವಾಗಿ ಕಾಣಿಸಿಕೊಳ್ಳುತ್ತದೆ. ನನ್ನ ಅನುಭವದಂತೆ ಚರ್ಮರೋಗ ತಜ್ಞರ ಬಹುಪಾಲು ರೋಗಿಗಳು ಶಿಲೀಂದ್ರ ಕಾಯಿಲೆಯಿಂದ ಬಳಲುವವರೆ ಆಗಿರುತ್ತಾರೆ. ಇದು ಸಾಮಾನ್ಯವಾಗಿ ತೊಡೆಯ ಸಂದು, ಪ್ರಷ್ಠಭಾಗ, ಕಂಕುಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಈ ಭಾಗವು ಬೆವರಿನಿಂದ ತೇವವಾಗಿರುವುದು ಪಂಗಸಿಗೆ ಅನುಕೂಲವಾಗುತ್ತದೆ. ವಾಸಿಯಾದಂತೆ ಕಂಡರು ಕೆಲವೇ ದಿನಗಳಲ್ಲಿ ಮತ್ತೆ ಪ್ರಾರಂಭವಾಗುತ್ತದೆ.

ಸಾಮಾನ್ಯವಾಗಿ ಪಂಗಸ್ ರೋಗಿಗಳು ಪ್ರಾರಂಭದಲ್ಲಿಯೇ ಡಾಕ್ಟರ್ ಹತ್ತಿರ ಬರಲು ನಿರ್ಲಕ್ಷ ತೋರುತ್ತಾರೆ. ಬದಲಾಗಿ ಜಾಹೀರಾತಿನ ಔಷಧಿ ಅಥವಾ ಮೆಡಿಕಲ್ ಸ್ಟೋರ್ನ ಹುಡುಗನಲ್ಲಿ ಕೇಳಿ, ಗೆಳೆಯರ ಸಲಹೆ ಮೇರೆಗೆ ಹತ್ತು ಹಲವಾರು ಪ್ರಯೋಗಗಳನ್ನು ನಡೆಸುತ್ತಾರೆ. ಯಾವುದಕ್ಕೂ ಫಂಗಸ್ ಬಗ್ಗದಿದ್ದಾಗ, ಉಪಾಯ ಕಾಣದೆ ವೈದ್ಯರಲ್ಲಿಗೆ ಬರುತ್ತಾರೆ. ಅಷ್ಟರಲ್ಲಿ ಈ ಫಂಗಸ್ ವ್ಯಾಪಕವಾಗಿ ಹರಡಿರುತ್ತದೆ.

ರೋಗಿಗಳು ವೈದ್ಯರಲ್ಲಿಗೆ ಬಂದಾಗ, "ಇದು ಅತಿ ಶೀಘ್ರದಲ್ಲಿ ವಾಸಿಯಾಗದ ಕಾಯಿಲೆ, ದೀರ್ಘಕಾಲದ ಔಷಧೋಪಚಾರ ಮಾಡಬೇಕಾಗುತ್ತದೆ" ಎಂದು ಮನವೊಲಿಸಬೇಕಾಗುತ್ತದೆ. ರೋಗ ಅವರದಾದರೂ ಕಾಳಜಿ ವೈದ್ಯರದಾಗಬೇಕು. ಇಲ್ಲದಿದ್ದರೆ ಕೆಲವೇ ದಿನಗಳಲ್ಲಿ ಚಿಕಿತ್ಸಾ ವಿಧಾನವೇ ಸರಿ ಇಲ್ಲವೆಂದು ಇನ್ನೊಂದು ಡಾಕ್ಟರನ್ನು ಹುಡುಕಲು ಪ್ರಾರಂಭಿಸುತ್ತಾರೆ. ಆದರೆ ಕಾಯಿಲೆಗೆ ಇತಿಶ್ರೀ ಹೇಳಲು ವಿಫಲರಾಗುತ್ತಾರೆ.

ಕೆಲವು ವರ್ಷಗಳ ಹಿಂದೆ ನನ್ನ ಕ್ಲಿನಿಕ್ಕಿಗೆ ಸದಾ ಬರುವ ರಾಜಸ್ಥಾನಿ ವ್ಯಾಪಾರಿ ಗೋಪಾಲ್ ರಾಮ್ ಆತನ ಸ್ನೇಹಿತ ರತನ್ ಲಾಲ್ ಎಂಬವರನ್ನು ಕರೆದುಕೊಂಡು ಬಂದಿದ್ದ. ರತನ್ ಲಾಲ್ ಚಿಕ್ಕಪೇಟೆಯಲ್ಲಿ ವ್ಯಾಪಾರವನ್ನು ಮಾಡುತ್ತಿದ್ದ. ಗೋಪಾಲ್ ರಾಮ್ "ಡಾಕ್ಟರ್! ನನ್ನ ಸ್ನೇಹಿತ ರತನ್ಗೆ ಈಗ ಒಂದು

ವರ್ಷದಿಂದ ಫಂಗಸ್ ಕಾಯಿಲೆಯಾಗಿದೆ. ಎರಡು ಮೂರು ಚರ್ಮರೋಗ ತಜ್ಞರಿಗೆ ತೋರಿಸಿ ಚಿಕಿತ್ಸೆ ಪಡೆದಿದ್ದಾನೆ. ಆದರೂ ಗುಣವಾಗಲಿಲ್ಲ. ಹಾಗಾಗಿ ನಿಮ್ಮನ್ನು ಕೇಳೋಣ ಎಂದು ಕರೆದುಕೊಂಡು ಬಂದೆ. ಯಾವುದಾದರೂ ಉತ್ತಮವಾದ ಮುಲಾಮು, ಮಾತ್ರೆಗಳನ್ನು ಬರೆದು ಕೊಡಿ. ಹಣ ಎಷ್ಟು ಬೇಕಾದರೂ ಆಗಲಿ" ಎಂದು ಹಿಂದಿಯಲ್ಲಿ ಗೋಗರೆದ.

ಸುಮಾರು 45 ವಯಸಿನ ರತನ್ ಲಾಲ್ ಸ್ವಲ್ಪ ದಪ್ಪವಾಗಿಯೇ ಇದ್ದ. ಈತನಿಗೆ ಡಯಾಬಿಟಿಸ್ ಇರಬಹುದೇ ಎನ್ನುವ ಸಂಶಯವು ಕಾಡಿತು. ಫಂಗಸ್ ಎಲ್ಲೆಲ್ಲಿ ಆಗಿದೆ ಎಂದು ತೋರಿಸಲು ಹೇಳಿದೆ. ತೊಡೆಯ ಸಂದಿ, ಬೆಲ್ಟು ತೊಡುವ ಭಾಗ, ಕೆಳಬೆನ್ನು, ಕಂಕಳು ಹೀಗೆ ತುಂಬಾ ಕಡೆ ಹರಡಿತ್ತು. ಆತನು ಈಗಾಗಲೇ ಪಡೆದ ಚಿಕಿತ್ಸೆಯ ವಿವರಗಳನ್ನು ನನ್ನ ಕೈಗೆ ಕೊಟ್ಟ. ಒಂದೇ ವರ್ಷದಲ್ಲಿ ಏಳು ವೈದ್ಯರನ್ನು ಭೇಟಿಯಾಗಿದ್ದ. ಹೆಚ್ಚಿನ ವೈದ್ಯರು ಸರಿಯಾಗಿಯೇ ಕಾಯಿಲೆಯನ್ನು ಗುರುತಿಸಿ ಮಾತ್ರೆಗಳನ್ನು ಬರೆದು ಕೊಟ್ಟಿದ್ದರು. ಒಂದು ವಿಶೇಷವೆಂದರೆ ಈತನಿಗೆ ಡಯಾಬಿಟಿಸ್ ಇರಬಹುದೆಂದು ಯಾವ ವೈದ್ಯರು ಊಹಿಸಿರಲಿಲ್ಲ.

ಹಾಗಾಗಿ ನಾನು ರತನ್ ಲಾಲನ ಮೂತ್ರ ಪರೀಕ್ಷೆಯನ್ನು ಮಾಡಿಸಲು ಬರೆದು ಕೊಟ್ಟೆ. ನನ್ನ ಊಹೆ ಸರಿಯಾಗಿತ್ತು. ರತನ್ ಲಾಲ್ ರಿಪೋರ್ಟ್ ತಂದಾಗ, ಆತನಿಗೆ ಡಯಾಬಿಟಿಸ್ ಇರುವುದು ತಿಳಿದುಬಂತು.

ಡಯಾಬಿಟಿಸ್ ಹಿಡಿತಕ್ಕೆ ಬರದೆ, ಪಂಗಸ್ ಕಾಯಿಲೆಯನ್ನು ನಿಯಂತ್ರಿಸುವುದು ಅಸಾಧ್ಯ. ಹಾಗಾಗಿ ರತನ್ ಲಾಲ್ ಹಾಗೂ ಗೋಪಾಲರಾಮ್ ಇಬ್ಬರನ್ನು ಕೂಡಿಸಿಕೊಂಡು ಫಂಗಸ್ ಕಾಯಿಲೆಯ ಬಗ್ಗೆ ವಿವರಿಸಿದೆ. ಅಷ್ಟೇ ಅಲ್ಲದೆ ಮೂರರಿಂದ ಆರು ತಿಂಗಳ ಕಾಲ ಚಿಕಿತ್ಸೆ ಕಡ್ಡಾಯವಾಗಿ ನಡೆಯಬೇಕಾಗುತ್ತದೆ. ಅದರಲ್ಲೂ ಡಯಾಬಿಟಿಸ್ ಸ್ತಿಮಿತಕ್ಕೆ ಬರದೆ ಈ ಕಾಯಿಲೆ ಗುಣವಾಗದು ಎಂದು ತಿಳಿಸಿದೆ. ಅವರಾದರೂ ನೀವು ಹೇಳಿದಂತೆ ಆಗಲಿ. ಎಷ್ಟು ಸಮಯದ ಚಿಕಿತ್ಸೆಯಾದರೂ ಆಗಬಹುದು. ಒಮ್ಮೆ ಗುಣಪಡಿಸಿ ಎಂದು ಕೈಮುಗಿದರು.

ಎಂಟಿ ಫಂಗಸ್ ಮಾತ್ರೆ ಇಟ್ರಕೊನ್ ರೋಲ್ 200 ಮಿಲಿ ಗ್ರಾಂ ದಿನಕ್ಕೆ ಒಂದರಂತೆ ಮೂರು ತಿಂಗಳು ತೆಗೆದುಕೊಳ್ಳಲು ಸೂಚಿಸಿ, ಹಚ್ಚಲು ಮುಲಾಮನ್ನು ಬರೆದು ಕೊಟ್ಟೆ. ಡಯಾಬಿಟಿಸ್ ಕಾಯಿಲೆಗೆ ಆಹಾರ ಕ್ರಮವನ್ನು ವಿವರಿಸಿದೆ. ಒಂದು ತಿಂಗಳ ನಂತರ ಫಂಗಸ್ ಬಗ್ಗೆ ಹತ್ತು ದಿನಗಳಲ್ಲಿ ಡಯಾಬಿಟಿಸ್ ಬಗ್ಗೆ ತಿಳಿಸುವಂತೆ ಎಚ್ಚರಿಸಿ ಕಳುಹಿಸಿದೆ. ರತನ್‌ಲಾಲನ ಸಕ್ಕರೆ ಕಾಯಿಲೆ ಶೀಘ್ರದಲ್ಲಿಯೇ ನಿಯಂತ್ರಣಕ್ಕೆ ಬಂತು.

ಒಂದು ತಿಂಗಳಲ್ಲಿ ರತನ್ ಲಾಲನಿಗೆ ಸುಮಾರು 90 ಪರ್ಸೆಂಟ್ ಫಂಗಸ್ ಕಾಯಿಲೆ ವಾಸಿಯಾಗಿತ್ತು. ಚರ್ಮ ಮೊದಲಿನ ಸ್ಥಿತಿಗೆ ಬಂದಿತ್ತು. ಆದರೂ ಇನ್ನೆರಡು ತಿಂಗಳು ಮಾತ್ರೆಯನ್ನು ಮುಂದುವರಿಸಲು ಸೂಚಿಸಿದೆ.

ಹೀಗೆ ಮೂರು ತಿಂಗಳ ಚಿಕಿತ್ಸೆಯನ್ನು ರತನ್‌ಲಾಲ್ ಪೂರೈಸಿ ಸಂಪೂರ್ಣ ಗುಣವಾಗಿದ್ದ.

ಒಂದು ಸಂಜೆ ರತನ್‌ಲಾಲ್ ಒಬ್ಬ ದಡೂತಿ ವ್ಯಕ್ತಿಯೊಂದಿಗೆ ನನ್ನ ಕ್ಲಿನಿಕ್ಕಿಗೆ ಬಂದ. ಈ ವ್ಯಕ್ತಿಯ ಹೆಸರು ಭಜನ್‌ಲಾಲ್, ನನ್ನ ಸೋದರ ಮಾವ ಎಂದು ಪರಿಚಯಿಸಿದ. ಸುಮಾರು 65 ವರ್ಷ ಪ್ರಾಯದ ಭಜನ್ ಲಾಲ್ ರಾಜಸ್ಥಾನದಲ್ಲಿ ವ್ಯವಸಾಯ ಮಾಡಿಕೊಂಡಿದ್ದ. ಈತನಿಗೂ ಎರಡು ವರ್ಷಗಳಿಂದ ಫಂಗಸ್ ಕಾಯಿಲೆ ಕಾಡುತ್ತಿತ್ತು. ರಾಜಸ್ಥಾನದಲ್ಲಿ ಹಲವಾರು ವೈದ್ಯರಿಂದ ಚಿಕಿತ್ಸೆ ಪಡೆದರೂ ಕಾಯಿಲೆ ವಾಸಿಯಾಗಿರಲಿಲ್ಲ. ನನ್ನ ಚಿಕಿತ್ಸೆಯಿಂದ ಗುಣ ಹೊಂದಿದ ರತನ್ ಲಾಲ್, ಮಾವನ ಕಾಯಿಲೆಗೆ ಚಿಕಿತ್ಸೆ ಕೊಡಿಸಲು ರಾಜಸ್ಥಾನದಿಂದ ನನ್ನಲ್ಲಿಗೆ ಕರೆದುಕೊಂಡು ಬಂದಿದ್ದ.

ಭಜನಲಾಲರಿಗೆ ಡಯಾಬಿಟಿಸ್ ಇದೆ ಎನ್ನುವುದು ಅವರನ್ನು ನೋಡುವಾಗಲೇ ನನಗೆ ಖಾತ್ರಿ ಆಗಿತ್ತು. ದೇಹದ ಸುಮಾರು 70 ಭಾಗವನ್ನು ಫಂಗಸ್ ಕಾಯಿಲೆ ಆವರಿಸಿತ್ತು. ಸಕ್ಕರೆ ಕಾಯಿಲೆ ಹಿಡಿತಕ್ಕೆ ಬಂದ ನಂತರ ಫಂಗಸ್ ಕಾಯಿಲೆ ಗುಣವಾಗುತ್ತದೆ. ಆದರೆ ಸುಮಾರು ಒಂದು ವರ್ಷಗಳ ಕಾಲ ಔಷದೋಪಚಾರವನ್ನು ಮಾಡಬೇಕಾಗುತ್ತದೆ ಎಂದು ಹೇಳಿದೆ. ನೀವು ಸರಿಯಾಗಿ ಔಷಧವನ್ನು ತೆಗೆದುಕೊಂಡರೆ ಕಾಯಿಲೆಯ ಮೊದಲೊಂದು ಗುಣವಾದ ನಂತರ ಒಂದು ಫೋಟೋವನ್ನು ತೆಗೆದು, ಔಷಧಿ ಕಂಪನಿಯ ಜಾಹೀರಾತಿಗೆ ಕಳುಹಿಸುತ್ತೇನೆ ಎಂದು ತಮಾಷೆ ಮಾಡಿದೆ. ಡಾಕ್ಟರ್ ಏನಾದರೂ ಮಾಡಿ ನನಗಂತೂ ಈ ಕಾಯಿಲೆಯಿಂದ ಮುಕ್ತಿ ಕೊಡಿಸಿ ಎಂಬುದು ಭಜನ್ ಲಾಲರ ಬೇಡಿಕೆಯಾಗಿತ್ತು.

ಬಜನ್‌ಲಾಲರ ಡಯಾಬಿಟಿಸ್ ರಿಪೋರ್ಟ್ ನೋಡಿ ಮಾತ್ರೆಗಳನ್ನು ಬದಲಾಯಿಸಿದೆ. ಮೊದಲ ತಿಂಗಳ ಎಂಟಿ ಫಂಗಸ್ ಮಾತ್ರೆಯ ಡೋಸನ್ನು ಹೆಚ್ಚಾಗಿ ತೆಗೆದುಕೊಳ್ಳಲು ಹೇಳಿದೆ. ನಂತರ ಅರ್ಧ ತೆಗೆದುಕೊಂಡರೆ ಸಾಕು ಎಂಬ ಸಲಹೆಯನ್ನು ನೀಡಿದೆ. ಮುಲಾಮನ್ನು ಬರೆದು, ಮೂರು ತಿಂಗಳ ನಂತರ ನೀವೇ ಬರಬೇಕೆಂದಿಲ್ಲ ವಾಟ್ಸಪ್ಪಲ್ಲಿ ಫೋಟೋ ಕಳುಹಿಸಿ ಎಂದು ಹೇಳಿದೆ.

ಮೂರು ತಿಂಗಳಿಗೆ ರತನ್‌ಲಾಲ್ ತನ್ನ ಮಾವ ಭಜನ್‌ಲಾಲರ ಫೋಟೋವನ್ನು ತಂದು ತೋರಿಸಿದ. ಭಜನ್ ಲಾಲರು ಫೋನಿನಲ್ಲಿ ತನ್ನ ಕಾಯಿಲೆಯ ಮಾಹಿತಿಯನ್ನು ನೀಡಿದರು ಅದಾಗಲೇ ಸುಮಾರು 80 ಪರ್ಸೆಂಟ್ ಫಂಗಸ್ ಗುಣವಾಗಿತ್ತು. ಇನ್ನೂ ಮೂರು ತಿಂಗಳು ಮಾತ್ರೆಯನ್ನು ಮುಂದುವರಿಸುವಂತೆ ಸೂಚಿಸಿದೆ. ಎರಡು ವರ್ಷಗಳ ಕಾಲ ಫಂಗಸ್ ಕಾಯಿಲೆಯಿಂದ ರೋಸಿ ಹೋದ ಭಜನ್ ಲಾಲ್ ನನ್ನ ಸಲಹೆಯನ್ನು ಚಾಚು ತಪ್ಪದೇ ಪಾಲಿಸಿದ್ದ.

ಹಾಗೆ ಆರು ತಿಂಗಳ ನಂತರ ಭಜನ್‌ಲಾಲ್ ರಾಜಸ್ಥಾನದಿಂದ ಖುದ್ದಾಗಿ ಬೆಂಗಳೂರಿಗೆ ಬಂದು, ನನ್ನನ್ನು ಭೇಟಿಯಾಗಿ ಕಾಯಿಲೆ ಗುಣವಾದ ಸಂತೋಷವನ್ನು ಹಂಚಿಕೊಂಡ. ನನಗೂ ಭಜನ್‌ಲಾಲರ ಕಾಯಿಲೆಯನ್ನು ವಾಸಿ ಮಾಡಿದ ಧನ್ಯತೆ ಮೂಡಿತು.

ಅನಂತರದ ದಿನಗಳಲ್ಲಿ ರಾಜಸ್ಥಾನದ ಹಲವಾರು ಫಂಗಸ್ ರೋಗಿಗಳಿಗೆ ವಾಟ್ಸಪ್ ಮೂಲಕವೇ ಚಿಕಿತ್ಸೆಯನ್ನು ನೀಡುವುದಾಯಿತು. ಅವರೆಲ್ಲರೂ ನನ್ನ ಸಲಹೆಯನ್ನು ಪಡೆದು ಗುಣಮುಖರಾದರು.

# ಬವಣೆ ನೀಗಿಸಿದ ಬೇವು

ಸುಶೀಲಮ್ಮ ಎಂಬ ಸುಮಾರು 45 ವರ್ಷ ಪ್ರಾಯದ ತಮಿಳು ಮಹಿಳೆ ನನ್ನ ಬಳಿ ಯಾವಾಗಲೂ ಚಿಕ್ಕಪುಟ್ಟ ಚಿಕಿತ್ಸೆಗಾಗಿ ಬರುತ್ತಿದ್ದಳು. ಒಂದು ದಿನ ಆಕೆ ತನ್ನ ಮಗಳಾದ ಲಕ್ಷ್ಮಿ ಎಂಬ ಹುಡುಗಿಯನ್ನು ಕರೆತಂದಿದ್ದಳು ನನ್ನ ಮಗಳ ಬಲಗಾಲಿನ ಪಾದದ ಮೇಲೆ ತುಂಬಾ ನರಗುಳ್ಳೆಗಳಿವೆ ಇದಕ್ಕೆನಾದರೂ ಚಿಕಿತ್ಸೆ ಇದೆಯಾ ಮುಲಾಮು ಬರೆದು ಕೊಡುತ್ತೀರಾ? ಎಂದಳು.

ಲಕ್ಷ್ಮಿಯ ಪಾದವನ್ನು ಪರೀಕ್ಷಿಸಿದಾಗ ಪಾದದ ಚರ್ಮ ಸುಮಾರು 15 - 20 ಸಣ್ಣ ಸಣ್ಣ ವಾರ್ಟಗಳಿಂದ (wart) ತುಂಬಿರುವುದು ಕಂಡಿತು. ಇದನ್ನು ವಾಡಿಕೆಯಲ್ಲಿ ನರಗುಳ್ಳೆ ಎನ್ನುತ್ತಾರೆ ಇದು ರೋಮನ್ ಬೆವಿಲೋಮ ವೈರಸ್ ಎಂಬ ಸೂಕ್ಷ್ಮಾಣು ಜೀವಿಯಿಂದ ಚರ್ಮದ ಮೇಲೆ ಎರಡರಿಂದ ಆರು ಮಿಲಿಮೀಟರ್ ಅಗಲದ ಗುಳ್ಳೆಗಳಾಗುತ್ತವೆ ಈ ಗುಳ್ಳೆಗಳು ಒತ್ತಿದರೆ ಗಟ್ಟಿಯಾಗಿ ಇರುತ್ತವೆ ಇದರಲ್ಲಿ 150 ವಿಧದ ವೈರಸ್ಗಳಿವೆ ಇದು ನೋವುಂಟುಮಾಡುವುದಿಲ್ಲವಾದರೂ ಕೆಲವೊಮ್ಮೆ ತುರಿಕೆ ಉಂಟಾಗುತ್ತದೆ ಇದು ಸ್ಪರ್ಶದಿಂದಲೂ ಬಟ್ಟೆಯಿಂದಲೂ ಬೇರೆಯವರಿಗೆ ಹರಡುತ್ತದೆ ಇದು ಸಾಧಾರಣ ಆಂಟಿಬಯೋಟಿಕ್ ಅಥವಾ ಮುಲಾಮುಗಳಿಗೆ ಬಗ್ಗುವುದಿಲ್ಲ ಹಾಗಾಗಿ ಈ ವೈರಾಣುಗಳು ಸುಟ್ಟು ಹೋಗುವಂತಹ ಸೆಲಿಸಿಲಿಕ್ ಆಸಿಡ್ (salysylic acid) ಇರುವ ಮುಲಾಮನ್ನು ಹಚ್ಚಲು ಹೇಳುತ್ತೇವೆ ಕ್ರಿಯೊಸರ್ಜರಿ ಎಂಬ ಚಿಕಿತ್ಸಾ ವಿಧಾನದಲ್ಲಿ ದ್ರವರೂಪದ ನೈಟ್ರೋಜನ್ ಅನ್ನು ಸ್ಪ್ರೇ ಮಾಡಿ ಈ ವಾರ್ಟನ್ನು ಸುಟ್ಟು ತೆಗೆಯುತ್ತಾರೆ.

ಈ ವಿಧಾನದಲ್ಲಿ ಅಥವಾ ಎಲೆಕ್ಟ್ರಿಕ್ ಕಾಟರಿಯಿಂದಲೂ ಸುಟ್ಟು ತೆಗೆದಾಗ ಚರ್ಮದಲ್ಲಿ ಗಾಯ ಆಗುತ್ತದೆ ಇವೆಲ್ಲ ಸ್ವಲ್ಪ ಕಷ್ಟಕರವಾದ ಚಿಕಿತ್ಸೆಯಾಗಿದೆ.

ಲಕ್ಷ್ಮಿಗೆ ಸೆಲಿಸಿಲಿಕ್ ಆಸಿಡ್‌ನ ಮುಲಾಮನ್ನು ಬರೆದುಕೊಟ್ಟು, ಹಚ್ಚುವ ವಿಧಾನವನ್ನು ತಿಳಿಸಿದೆ. ಇದಾದನಂತರ ಬರುವಂತೆ ಹೇಳಿದೆ ಈ ರೀತಿಯಾಗಿ ಔಷಧಿಯನ್ನು ಬಳಸಿ 15 ದಿನಗಳ ನಂತರ ಲಕ್ಷ್ಮಿ ಬಂದಳಾದರು ಮುಲಾಮಿನಿಂದ ಏನು ಪ್ರಯೋಜನ ಆಗಲಿಲ್ಲ ಅವರ ಆರ್ಥಿಕ ಸ್ಥಿತಿಯನ್ನು ಗಮನಿಸಿ ವಿಕ್ಟೋರಿಯಾ ಆಸ್ಪತ್ರೆಯ ಚರ್ಮರೋಗ ವಿಭಾಗಕ್ಕೆ ರೆಫರೆನ್ಸ್ ಲೆಟರ್ ಬರೆದು ಕಳುಹಿಸಿದೆ.

ಒಂದು ವಾರದಲ್ಲಿ ಸುಶೀಲಮ್ಮ ಮಗಳ ಜೊತೆ ಪುನಃ ಕ್ಲಿನಿಕ್ಕಿಗೆ ಬಂದಳು

ಆಸ್ಪತ್ರೆಯಲ್ಲಿ ಮೂರು ನಾಲ್ಕು ವಾರ್ಟಗಳನ್ನು ಎಲೆಕ್ಟ್ರಿಕ್ ಕಾಟರಿಯಿಂದ ಸುಟ್ಟಿದ್ದರು ಹಾಗಾಗಿ ಚರ್ಮದಲ್ಲಿ ಗಾಯವಾಗಿ ಇನ್ಫೆಕ್ಷನ್ ಆಗಿತ್ತು ಪರೀಕ್ಷಿಸಿ ಗಾಯಕ್ಕೆ ಆಂಟಿ ಬಯೋಟಿಕ್ ಮುಲಾಮನ್ನು ಹಾಗೂ ಮಾತ್ರೆಗಳನ್ನು ಬರೆದು ಕೊಟ್ಟೆ ನನಗೂ ಕೂಡ ಈ ಸಮಸ್ಯೆಗೆ ಸುಲಭವಾದ ಚಿಕಿತ್ಸಾ ವಿಧಾನ ತಿಳಿದಿರಲಿಲ್ಲ ಆದರೂ ಪರೀಕ್ಷೆಗಾಗಿ 10 ದಿನಗಳ ನಂತರ ಬರಲು ಸೂಚಿಸಿದೆ.

ಹತ್ತು ದಿನಗಳ ನಂತರ ಬರಬೇಕಾಗಿದ್ದ ಸುಶೀಲಮ್ಮ ತಿಂಗಳಾದರೂ ಬರಲಿಲ್ಲ ನಂತರದಲ್ಲಿ ಒಂದು ದಿನ ಲಕ್ಷ್ಮಿಯೊಂದಿಗೆ ಸುಶೀಲಮ್ಮ ಬಂದರು ಅಂದು ಲಕ್ಷ್ಮಿಯ ಜ್ವರದ ತಪಾಸಣೆಗಾಗಿ ಬಂದಿದ್ದರು. ಲಕ್ಷ್ಮಿಯ ಜ್ವರವನ್ನು ಪರೀಕ್ಷಿಸುತ್ತಿರುವ ನನಗೆ ಅವಳ ಕಾಲಿನ ವಾರ್ಟಿನ ಬಗ್ಗೆ ಕುತೂಹಲ ಏಳುತ್ತಿತ್ತು ಹಾಗಾಗಿ ಔಷಧಿಯನ್ನೆಲ್ಲ ಬರೆದಾದ ಮೇಲೆ ಕಾಲಿನ ವಾರ್ಟಿನ ಬಗ್ಗೆ ವಿಚಾರಿಸಿದೆ ಹುಡುಗಿಯು ಸಂತೋಷದಿಂದಲೇ ಪಾದವನ್ನು ತೋರಿಸಿದಳು.

ಆಶ್ಚರ್ಯವೆಂಬಂತೆ ಕಾಲಿನ ಮೇಲಿರುವ  ಇನ್ನುಳಿದ ವಾರ್ಟಗಳು ಮಾಯವಾಗಿತ್ತು. ಗಾಯಗಳೇನೂ ಇರಲಿಲ್ಲ ಸ್ವಲ್ಪ ಕಲೆ ಕಾಣುತ್ತಿತ್ತು ಸುಶೀಲಮ್ಮನವರನ್ನು ಏನು ಚಿಕಿತ್ಸೆ ಕೊಡಿಸಿದರೆಂದು ವಿಚಾರಿಸಿದೆ.

ಸುಶೀಲಮ್ಮ ಹೇಳಿದರು 'ಡಾಕ್ಟ್ರೇ! ವಿಕ್ಟೋರಿಯಾದಲ್ಲಿ ಒಂದು ವಾರ ಬಿಟ್ಟುಬರುವುದಕ್ಕೆ ಹೇಳಿದ್ದರು ಕಾಲೂ ಕೂಡ ಸುಟ್ಟು ಗಾಯವಾಗಿತ್ತು. ನೀವು ಕೊಟ್ಟ ಮಾತ್ರೆ ಮುಲಾಮಿನಿಂದ ಗಾಯವೆಲ್ಲ ವಾಸಿಯಾಯಿತು ನಾವು ಮಾತ್ರ ಮತ್ತೆ ವಿಕ್ಟೋರಿಯಾ ಆಸ್ಪತ್ರೆಯ ಕಡೆಗೆ ಹೋಗಲಿಲ್ಲ ಅನಂತರ ಒಂದು ಮದುವೆಗಾಗಿ ತಮಿಳುನಾಡಿನಲ್ಲಿರುವ ನಮ್ಮೂರಿಗೆ ಹೋಗಿದ್ದೆವು ಬೇವಿನ ಎಲೆಯ ರಸದಲ್ಲಿ ಅರಿಶಿಣ ಕೊಂಬನ್ನು ತೇದು ದಿನಕ್ಕೆರಡು ಬಾರಿ ಹಚ್ಚುವಂತೆ ಹೇಳಿದರು. ಅದನ್ನು ಹಚ್ಚಲು ಪ್ರಾರಂಭಿಸಿ ಒಂದು ವಾರದೊಳಗೆ ಎಲ್ಲಾ ಗುಳ್ಳೆಗಳು ಬಿದ್ದು ಹೋದವು ಅಲ್ಲದೆ ಗಾಯವೂ ಆಗಲಿಲ್ಲ ಎಂದಳು.

ನನಗೆ ಆಶ್ಚರ್ಯ ಸಂತೋಷ ಒಟ್ಟಿಗೆ ಆಯಿತು ನಮ್ಮ ವೈದ್ಯಕೀಯಕ್ಕೆ ಅತ್ಯಂತ ಕ್ಲಿಷ್ಟಕರವಾದ ಚಿಕಿತ್ಸೆಗೆ ಹಿತ್ತಲ ಗಿಡ ಒಂದು ಮದ್ದಾಗಿ ರೋಗವನ್ನು ನಿವಾರಿಸಿತ್ತು  ಅಷ್ಟೇ ಅಲ್ಲದೆ ನೋವು ಇಲ್ಲ ಖರ್ಚು ಇಲ್ಲದ ಈ ಚಿಕಿತ್ಸೆ ನನ್ನ ಮನಸ್ಸಿಗೆ ತುಂಬಾ ಹಿಡಿಸಿತ್ತು.

ಬೇವಿನ ಎಲೆಯ ರಸ ಹಾಗೂ ಅರಿಶಿಣದಲ್ಲಿ ರೋಗಾಣುಗಳನ್ನು ನಾಶ ಮಾಡುವ ಗುಣವಿದೆ ಹಾಗಾಗಿ ಅವೆರಡನ್ನು ಸೇರಿಸಿ ನಿಯಮಿತವಾಗಿ ಹಚ್ಚಿದಾಗ ವಾರ್ಟಿನ ವೈರಸ್ ನಾಶವಾಗಿ ನರಗುಳ್ಳೆಗಳು ತನ್ನಿಂದ ತಾನೇ ಬಿದ್ದು ಹೋಗುತ್ತದೆ

ಮುಂದೆ ನನ್ನ ಮೆಡಿಸಿನ್ ಬತ್ತಳಿಕೆಯಲ್ಲಿ ಈ ಒಂದು ಗ್ರಾಮಬಾಣವು ಸೇರಿಕೊಂಡಿತು. ಇದೇ ಔಷಧಿಯಿಂದ ನನ್ನ ಅಣ್ಣನ ಸೊಸೆಯ ಕೈ ಮೇಲಿದ್ದ

ಏಳೆಂಟು ನರಗುಳ್ಳೆಗಳು ಗುಣವಾಯಿತು.

ನನ್ನ ಮಗ ಗಣೇಶ ನೆದರ್‌ಲ್ಯಾಂಡ್ ನಲ್ಲಿ ವಾಸವಿದ್ದಾನೆ ನನ್ನ ಮೊಮ್ಮಕ್ಕಳ ಜನನ ಸಮಯದಲ್ಲಿ ನಾನು ಮತ್ತು ನನ್ನ ಹೆಂಡತಿ ಜಯಂತಿ ಇಬ್ಬರು ಅಲ್ಲಿಗೆ ಹೋದೆವು ಆಗ ನೆದರ್ ಲ್ಯಾಂಡ್‌ನ ಆರ್ಮಸ್ಟರ್‌ಡ್ಯಾಂ ನಲ್ಲಿರುವ ಭಾರತೀಯರೆಲ್ಲ ಸೇರಿ ಆಗಾಗ ಒಬ್ಬೊಬ್ಬರ ಮನೆಯಲ್ಲಿ ಔತಣಕೂಟವನ್ನು ಏರ್ಪಡಿಸುತ್ತಿದ್ದರು ಅಂತಹ ಸಂದರ್ಭದಲ್ಲಿ ಊರಿನಿಂದ ಯಾರಾದರೂ ಬಂದಿದ್ದರೆ ಅವರಿಗಂತು ವಿಶೇಷವಾದ ಆಹ್ವಾನ ಇದ್ದೇ ಇರುತ್ತೆ ಹೀಗೆ ಮಗನ ಮನೆಯಿಂದ ಒಂದು ಔತಣಕೂಟಕ್ಕೆ ನಾವಿಬ್ಬರು ಹೋದೆವು.

ಔತಣಕೂಟಕ್ಕೆ ಬಂದ ಗಡ್ಡದಾರಿ ಹುಡುಗನೊಬ್ಬ 'ಅಂಕಲ್ ನನ್ನ ಪರಿಚಯ ಆಗಲಿಲ್ಲವೇ? ನಾನು ಶೈಲೇಶ, ಈ ಹಿಂದೆ ನೀವು ಬಂದಾಗ ಭೇಟಿಯಾಗಿದ್ದೇವಲ್ಲ' ಎಂದು ಮಾತನಾಡಿಸಿದ ನನಗೆ ಆತನ ಗಡ್ಡದ ಕಾರಣದಿಂದ ಗುರುತು ಸಿಗಲಿಲ್ಲ. ಏನಪ್ಪಾ ಈ ರೀತಿಯ ಗಡ್ಡ ಬೆಳೆಸಿದ್ದೀಯ ನಿನ್ನ ಈ ಹೊಸ ಸ್ಟೈಲ್‌ನಿಂದ ನನಗೆ ಪರಿಚಯವೇ ಸಿಗಲಿಲ್ಲ ಎಂದು ಕಾಲೆಳೆದೆ. ಆತ ನನ್ನನ್ನು ಜನರಿಂದ ಸ್ವಲ್ಪ ದೂರ ಕರೆದು ಅಂಕಲ್ ಗಡ್ಡದಲ್ಲಿ ನನಗೆ ಸ್ವಲ್ಪ ಪ್ರಾಬ್ಲಮ್ ಇದೆ ಅದನ್ನು ಮುಚ್ಚಲು ಈ ರೀತಿ ಗಡ್ಡ ಬಿಟ್ಟಿದ್ದೇನೆ ನೀವು ಡಾಕ್ಟರ್ ಆದಕಾರಣ ತೋರಿಸುತ್ತಿದ್ದೇನೆ ಇದಕ್ಕೆ ಏನಾದರೂ ಚಿಕಿತ್ಸೆ ಇದೆಯಾ ಎಂದು ಕೇಳಿದ ಆತನ ಗಡ್ಡ ಸರಿಸಿದಾಗ ವಾರ್ಟ ಪ್ರತ್ಯಕ್ಷವಾಗಿತ್ತು

ಯುರೋಪು ಬಹಳ ಮುಂದುವರಿದ ದೇಶ ಹಾಗಾಗಿ ವಾರ್ಟಗೆ ಚಿಕಿತ್ಸೆ ಇರಬಹುದೆಂದು ಭಾವಿಸಿದ್ದೆ ಅದಕ್ಕಾಗಿ ಇದಕ್ಕೆ ಏನು ಚಿಕಿತ್ಸೆ ಮಾಡಿದ್ದೀಯಾ ಎಂದು ಕೇಳಿದೆ ಅದಕ್ಕೆ ಅಲ್ಲಿರುವುದು ಭಾರತದಲ್ಲಿರುವ ಚಿಕಿತ್ಸೆಯೆ ಆಗಿತ್ತು ಭಾರತೀಯ ಲೆಕ್ಕದಲ್ಲಿ ಸುಮಾರು 40,000 ಖರ್ಚು ಮಾಡಿದ್ದ ಪ್ರಯೋಜನ ಮಾತ್ರ ಏನೂ ಇರಲಿಲ್ಲ ಮುಖದಲ್ಲಾದ್ದರಿಂದ ಸಹಜವಾಗಿಯೇ ಬೇಸರಗೊಂಡಿದ್ದ.

ನಾನು ತಮಾಷೆ ಮಾಡುತ್ತಾ 'ನನಗೆ ಇಲ್ಲಿ ಖರ್ಚು ಮಾಡಿದ ಅರ್ಧ ಶುಲ್ಕ ಕೊಡು ಇದನ್ನು ಸಂಪೂರ್ಣ ಗುಣಪಡಿಸುತ್ತೇನೆ' ಎಂದು ಹೇಳಿದೆ ಹಾಗೆ ಸುಶೀಲಮ್ಮನಿಂದ ಪಡೆದ ಬೇವು ಅರಿಶಿಣದ ಔಷಧಿಯನ್ನು ತಿಳಿಸಿದೆ 'ಊರಿನಿಂದ ಬೇವಿನ ಎಲೆಯನ್ನು ತರಿಸಿಕೊಂಡು ಪ್ರಯತ್ನಿಸುತ್ತೇನೆ' ಎಂದು ಹೇಳಿದ ಮತ್ತೆ ಒಂದೆರಡು ತಿಂಗಳಲ್ಲಿ ನಾವು ಬೆಂಗಳೂರಿಗೆ ವಾಪಸದೆವು.

ನಾನು ಬೆಂಗಳೂರಿಗೆ ಬಂದರು ಶೈಲೇಶನ ಗಡ್ಡವೇ ನನ್ನನ್ನು ಕಾಡುತ್ತಿತ್ತು ಹಾಗಾಗಿ ಆಗಾಗ ಮಗನಿಗೆ ಫೋನ್ ಮಾಡಿದಾಗ ಶೈಲೇಶನ ವಿಚಾರವನ್ನು ಕೇಳುತ್ತಿದೆ ಸುಮಾರು ಮೂರು ತಿಂಗಳ ನಂತರ ಮಗ ಗಣೇಶ ಇತ್ತೀಚೆಗೆ ಶೈಲೇಶ ಸಿಕ್ಕಿದ್ದ ವಿಚಾರಿಸಿದೆ ನೀವು ಹೇಳಿದಂತೆ ಊರಿನಿಂದ ಬೇವಿನೆಲೆಯನ್ನು

ತರಿಸಿಕೊಂಡು ಅರಿಶಿಣದ ಔಷಧಿಯನ್ನು ತಯಾರಿಸಿ ಹಚ್ಚಿದನಂತೆ 15 ದಿನದಲ್ಲಿ ಮುಖದಲ್ಲಿರುವ ನರಗುಳ್ಳೆಗಳೆಲ್ಲ ಮಾಯವಾಯಿತು ಎಂದ ಅಷ್ಟೇ ಅಲ್ಲದೆ ಈಗ ಗಡ್ಡವನ್ನು ಬೋಳಿಸಿಕೊಂಡು ಟ್ರಿಮ್ ಆಗಿದ್ದಾನೆ ಎಂದು ಹೇಳಿದ

ಅಲ್ಲಿ ಚಿಕಿತ್ಸೆಗಾಗಿ ಸಾವಿರಾರು ರೂಪಾಯಿಗಳನ್ನು ಶೈಲೇಶ ಕಳೆದಿದ್ದ ಆದರೆ ಚಿಕ್ಕ ಸಲಹೆಯಲ್ಲಿ ಗುಣವಾದ ವಿಷಯವನ್ನು ಒಂದು ಫೋನಿನಲ್ಲಿ ತಿಳಿಸುವ ಪ್ರಯತ್ನವನ್ನು ಮಾಡಲಿಲ್ಲ ಹಲವರಿಗೆ ದುಡ್ಡನ್ನು ಕಳೆದು ತೆಗೆದುಕೊಂಡ ಚಿಕಿತ್ಸೆಯಿಂದ ರೋಗ ಗುಣವಾದರೆ ಅದಕ್ಕೆ ಮಾತ್ರ ಬೆಲೆ ಎನ್ನುವ ಭಾವನೆ ಇರುತ್ತದೆ. ಅವರಿಗೆಲ್ಲ ಸುಶೀಲಮ್ಮನ ಔಷಧಿಯಿಂದ ರೋಗ ಗುಣವಾದರೂ ಸಲಹೆಗೆ ಬೆಲೆ ಇಲ್ಲ ಎಂಬಂತೆ ಇರುತ್ತಾರೆ.

# ಎರಡು ಹುಟ್ಟುಗಳು

ಈ ದೇಶ ಮೊದಲು ಹೇಗಿತ್ತೆಂದು ನಮ್ಮಂತ ಸಾಮಾನ್ಯರಿಗೆ ತಿಳಿದಿಲ್ಲ ತಿಳಿಸಲೂ ಇಲ್ಲ. ಹಂಪಿಯಿಂದ ಕಾರ್ಕಳದವರೆಗಿನ ಶಿಲ್ಪ ಕಲ್ಪಗಳಿಂದ ನಮ್ಮವರ ಉನ್ನತಿಯನ್ನು ಊಹಿಸದಿರುವುದು ಹೇಗೆ? ಭಗ್ನಗೊಳಿಸಿದ ಶಿಲ್ಪಗಳು ಹೇಳುವ, ಮುರಿದ ಮುಕ್ಕಿದ ಇಲ್ಲಿನ ಜನಜೀವನದ ಕಥೆಯನ್ನು ಕೇಳದಿರುವುದು ಹೇಗೆ? ಇಸ್ಲಾಮಿನ ಆಕ್ರಮಣ, ಬ್ರಿಟಿಷರ ದಬ್ಬಾಳಿಕೆಗೆ ಅಳಿದದ್ದೆಷ್ಟೊ ಉಳಿದದ್ದೆಷ್ಟೊ? ಮುಂದೆ ಬಂದವರು ಹೆಸರಿನಲ್ಲಿ ಭಾರತೀಯರು ಮನಸ್ಸಿನಲ್ಲಿ ಬ್ರಿಟಿಷರಾಗಿದ್ದರು. ಹಾಗಾಗಿ ಮೂಲಭೂತ ಅವಶ್ಯಕತೆಯಾದ ಅನ್ನ, ಔಷಧಿಗಳು, ಮೂಲಭೂತ ವ್ಯವಸ್ಥೆಯಾದ ರಸ್ತೆ ಬೆಳಕುಗಳು ಜನಜೀವನದಿಂದ ಬಹು ದೂರವೇ ಇತ್ತು. 70 ರ ದಶಕದಲ್ಲಿ, ಧಾಳಿಯನ್ನು ಎದುರಿಸಲು ಮದ್ದು ಗುಂಡುಗಳಿಲ್ಲದ ಕೋವಿಯನ್ನು ಹೊತ್ತು ಯುದ್ಧಕ್ಕೆ ಹೊರಡುವ ಸೈನಿಕರ ಸ್ಥಿತಿ, ವೈದ್ಯರಿಗೂ ಇತ್ತು. ಹಲವು ಬಾರಿ ರೋಗಿಯ ಯೋಗವೇ ವೈದ್ಯನ ಸಾಹಸಕ್ಕೆ ಫಲ ನೀಡುತ್ತಿತ್ತು.

73–74 ರಲ್ಲಿ ವೈದ್ಯ ವೃತ್ತಿಯನ್ನು ಆರಂಭಿಸಿದೆ. ಇದಕ್ಕೂ ಹಿಂದೆ ಗರ್ಭಿಣಿಯರ ಆರೈಕೆ ಹೇಗಿತ್ತು ಎಂಬುದು ಗೊತ್ತಿಲ್ಲ, ಹೊಸದು ಸಾಮಾನ್ಯರಿಗೆ ಸಿಕ್ಕಲಿಲ್ಲ ಎಂಬಂತಿತ್ತು. ಪ್ರಸವಪೂರ್ವ ತಪಾಸಣೆ ಹಲವರಿಗೆ ಗೊತ್ತಿಲ್ಲ, ಗೊತ್ತಿದ್ದರೆ ಲಭ್ಯವು ಇಲ್ಲ. ಹಳ್ಳಿಗಳ ಕೆಲವು ಮನೆಗಳಲ್ಲಿ ಗರ್ಭಿಣಿಯರಿಗೆ ಹೊಟ್ಟೆಗೆ ತುಂಬಾ ಅನ್ನಹಾರವೂ ಸಿಗುತ್ತಿತ್ತೊ ತಿಳಿಯದು. ಪ್ರಸವ ವೇದನೆ ಕಾಣಿಸಿಕೊಳ್ಳುವವರೆಗೂ ಕೆಲಸವಂತೂ ನಿರಂತರವಾಗಿ ನಡೆಯುತ್ತಿತ್ತು. ಪ್ರಸವ ವೇದನೆ ಕಂಡಾಗ, ಹಳ್ಳಿಯಲ್ಲಿ ಕೆಲವು ಸೂಲಗಿತ್ತಿಯರು ಇದ್ದೇ ಇರುತ್ತಿದ್ದರು. ಅವರಾದರೂ ಪ್ರಸವ ವಿಧಾನವನ್ನು ಕಲಿತವರಲ್ಲ, ಅಲ್ಲೋ ಇಲ್ಲೋ ನೋಡಿ ನೋಡಿ ಮತ್ತು ಸಂದರ್ಭವನ್ನು ಆದಷ್ಟು ನಿಭಾಯಿಸುವ ಧೈರ್ಯವನ್ನು ಹೊಂದಿದವರು ಅಷ್ಟೆ. ನಾನು ಬ್ರಹ್ಮಾವರದಲ್ಲಿ ಕ್ಲಿನಿಕ್ ಪ್ರಾರಂಭಿಸಿದ ಸಮಯಕ್ಕೆ, ಅಲ್ಲಿ ಸರ್ಕಾರಿ ಪ್ರೈಮರಿ ಹೆಲ್ತ್ ಸೆಂಟರ್ ಒಂದು ಪ್ರಾರಂಭವಾಗಿತ್ತು. ಅಲ್ಲಿ ಇಬ್ಬರು ಪ್ರಸೂತಿ ತರಬೇತಿಯನ್ನು ಪಡೆದ ದಾದಿಯರು ಇದ್ದರು.

ಒಂದು ದಿನ ಬೆಳಿಗ್ಗೆ 10 ಗಂಟೆಯ ಸಮಯ ರೋಗಿಗಳನ್ನು ನಿರೀಕ್ಷಿಸುತ್ತಾ ಕುಳಿತಿದ್ದೆ. ಬ್ರಹ್ಮಾವರದ ಹೈಸ್ಕೂಲಿನಲ್ಲಿ ಓದುವಾಗ ನನಗಿಂತ ಎರಡು ವರ್ಷ ಮುಂದಿನ ತರಗತಿಯಲ್ಲಿದ್ದ ಸ್ನೇಹಿತ ಶ್ರೀನಿವಾಸ ಆಚಾರರು ಬಂದರು. ಇವರು, ನಾನು

ಬ್ರಹ್ಮಾವರದಲ್ಲಿ ಕ್ಲಿನಿಕ್ ತೆರೆದಾಗ ಹುರಿದುಂಬಿಸಿ, ಆತ್ಮವಿಶ್ವಾಸವನ್ನು ತುಂಬಿದವರು ಕೂಡ. ಆಚಾರರ ಜೊತೆಯಲ್ಲಿ ಇನ್ನೊಬ್ಬರಿದ್ದರು. ಅವರನ್ನು ತೋರಿಸುತ್ತಾ, "ಹಂದೆಯವರೇ ಇವರ ಪರಿಚಯ ನಿಮಗಿದೆಯೋ ಗೊತ್ತಿಲ್ಲ. ಮೈಸೂರಿನಲ್ಲಿ ಎಂ.ಬಿ.ಬಿ.ಎಸ್. ಮುಗಿಸಿ ಬಂದಿದ್ದಾರೆ. ಹೆಸರು ಡಾಕ್ಟರ್ ಶ್ರೀಧರ್, ಹೌಸ್ ಸರ್ಜನ್ ಮುಗಿಸಿ, ಈಗ ಅಮೆರಿಕಕ್ಕೆ ತೆರಳುವ ಪ್ರಯತ್ನದಲ್ಲಿದ್ದಾರೆ. ಇವರ ಅಣ್ಣ ನನ್ನ ಕ್ಲಾಸ್ಮೇಟ್ ನಾರಾಯಣರಾವ್, ಎಂದು ವಿವರವಾಗಿ ಮಾತನಾಡಿದರು.

ನನ್ನಿಂದ ಇವರಿಗೆ ಏನಾಗಬೇಕು ಎಂದು ಬಂದ ಯೋಚನೆಯನ್ನು ತಡೆದುಕೊಂಡು, "ಇವರ ಪರಿಚಯ ಈಗಲೇ ಆಗಿದ್ದು ಅಷ್ಟೇ, ಅವರನ್ನು ಇಲ್ಲಿವರೆಗೆ ಕರೆದುಕೊಂಡು ಬಂದಿರಲ್ಲ! ಆಚಾರರೇ ಏನಾಗಬೇಕಿತ್ತು? ಎಂದು ಕೇಳಿದೆ.

ಡಾ. ಶ್ರೀಧರ ಅಕ್ಕ ತುಂಬ ಗರ್ಭಿಣಿ. ಹೇಗೂ ಮನೆಯಲ್ಲಿ ಡಾಕ್ಟರ್ ಇದ್ದಾರೆ ಎಂಬ ವಿಶ್ವಾಸದಲ್ಲಿ ಗರ್ಭಿಣಿಯನ್ನು ಆಸ್ಪತ್ರೆಗೂ ಸೇರಿಸಲಿಲ್ಲ. ಬೆಳಿಗ್ಗೆ 8 ಗಂಟೆಗೆ ಸುಸೂತ್ರವಾಗಿ ಹೆರಿಗೆಯಾಯಿತು. ಆದರೆ ಇನ್ನೂ ಕಸ ಬಿದ್ದಿರಲಿಲ್ಲ. ಹಳ್ಳಿಯಲ್ಲಿ ಈ ಪ್ಲೆಸೆಂಟಾವನ್ನು ಕಸವೆಂದೇ ಕರೆಯುತ್ತಾರೆ. ಇದು ಮಗುವಿನ ಹೊಕ್ಕುಳ ಬಳ್ಳಿಯ ಮೂಲಕ, ತಾಯಿಯ ಗರ್ಭಕೋಶವನ್ನು ಅಂಟಿಕೊಂಡಿರುವ ತತ್ಕಾಲದ ಒಂದು ಅಂಗ ರಚನೆ. ಈ ಪ್ಲೆಸೆಂಟಾ ಮತ್ತು ಹೊಕ್ಕುಳ ಬಳ್ಳಿಗಳಿಂದ ಮಗುವಿನ ಜೀವ ಕ್ರಿಯೆ ಗರ್ಭದಲ್ಲಿ ನಡೆಯುತ್ತದೆ. ಹೊಕ್ಕುಳ ಬಳ್ಳಿಯನ್ನು ಕತ್ತರಿಸಿದ ಮೇಲೆ ಪ್ಲೆಸೆಂಟಾಕ್ಕೆ ಬೇರಾವ ಕೆಲಸವೂ ಇಲ್ಲ, ಹಾಗಾಗಿ ಸಹಜವಾಗಿಯೇ ಈ ಪ್ಲೆಸೆಂಟಾ, ಕಸವೇ ಆಗುತ್ತದೆ. ಬೇಡದ ಯಾವ ವಸ್ತುವನ್ನು ಶರೀರ ಇಟ್ಟುಕೊಳ್ಳುವುದಿಲ್ಲ. ಹಾಗೆ ಇಟ್ಟುಕೊಂಡಾಗಲೇ ಅಪಾಯವು, ಅನಾರೋಗ್ಯವು ಉಂಟಾಗುತ್ತದೆ.

ಇಲ್ಲಿಯೂ ಈ ಕಸ ಗರ್ಭಕೋಶದ ಅಕುಂಚನದಿಂದ ಹೊರಬೀಳದಿದ್ದರೆ, ಅತಿಯಾದ ರಕ್ತಸ್ರಾವದಿಂದ ತಾಯಿಯ ಜೀವಕ್ಕೆ ಅಪಾಯ ಉಂಟಾಗುತ್ತದೆ. ಇದು ಗಂಭೀರವಾದ ವಿಷಯವಾದ್ದರಿಂದ ಆಸ್ಪತ್ರೆಗೆ ಕರೆದುಕೊಂಡು ಹೋಗುವಂತೆ ಸಲಹೆಯನ್ನು ನೀಡಿದೆ. ಆದರೆ ಅವರಿಬ್ಬರೂ, "ಒಮ್ಮೆ ನೀವು ಬಂದು ನೋಡಿ" ಎಂದು ವಿನಂತಿಸಿದರು. ಸುಮಾರು ನಾಲ್ಕು ಕಿಲೋಮೀಟರ್ ಟ್ಯಾಕ್ಸಿಯಲ್ಲಿ ಹೋಗಿ ಮತ್ತರ್ಧ ಕಿಲೋಮೀಟರ್, ಹೊರ ಗದ್ದೆಗಳ ನಡುವೆ ನಡೆದು, ಅವರ ಮನೆಯನ್ನು ತಲುಪಿದೆವು. ಯಾವುದಕ್ಕೂ ಇರಲಿ ಎಂದು ಬೇಕಾದ ಇಂಜೆಕ್ಷನ್, ಸಲಕರಣೆಗಳನ್ನೆಲ್ಲ ತೆಗೆದುಕೊಂಡು ಹೋಗಿದ್ದೆ. ಈ ಪರಿಸ್ಥಿತಿಯಲ್ಲಿರುವ ಬಾಣಂತಿಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗುವುದೂ ಸುಲಭವಲ್ಲ ಎಂದು ಅಲ್ಲಿ ನಡೆದುಹೋಗುವಾಗಲೇ ಅನಿಸಿತ್ತು.

ಬಾಣಂತಿಯನ್ನು ಪರೀಕ್ಷಿಸಿದೆ. ಬಿ. ಪಿ. ನಾಡಿ ಬಡಿತಗಳೆಲ್ಲ ಸರಿಯಾಗಿಯೇ ಇತ್ತು. ಅದೃಷ್ಟದಿಂದ ರಕ್ತಸ್ರಾವವು ಅಷ್ಟಾಗಿ ಆಗಿರಲಿಲ್ಲ.

ಹಾಗೆಂದು ಮುಂದಿನ ಚಿಕಿತ್ಸೆಯನ್ನು ಮಾಡದಿದ್ದರೆ ವೃತ್ತಿ ಧರ್ಮಕ್ಕೆ ಚ್ಯುತಿ ಬಂದಂತೆ. ಆತ್ಮವಿಶ್ವಾಸದೊಂದಿಗೆ ಬಹುದೊಡ್ಡ ರಿಸ್ಕ್ ತೆಗೆದುಕೊಳ್ಳಲು ಸಿದ್ಧನಾದೆ. ಡಾ. ಶ್ರೀಧರ ಅವರನ್ನು ಪಕ್ಕದಲ್ಲಿ ಇರಿಸಿಕೊಂಡು ಗ್ಲೌಸ್ ಧರಿಸಿ, ನನ್ನ ಕೆಲಸವನ್ನು ಪ್ರಾರಂಭಿಸಿದೆ. ಕಸವನ್ನು ಗರ್ಭಕೋಶದಿಂದ ತೆಗೆಯುವುದು, ಬಾಣಂತಿಗೆ ಕಂಪೋಸ್ ಇಂಜೆಕ್ಷನ್ ಕೊಡುವುದು ಏಕಕಾಲಕ್ಕೆ ನಡೆಯಬೇಕು. ಈ ಇಂಜೆಕ್ಷನ್‌ನಿಂದ ಮಂಪರು ಬಂದು ನೋವಿನ ಅರಿವಳಿಕೆಯಾಗುವುದಿಲ್ಲ. ದೇಹದಿಂದ ಪ್ಲೆಸೆಂಟಾ ಬೇರಾದಾಕ್ಷಣ, ಮೆಡರ್ಜಿನ್ ಇಂಜೆಕ್ಷನ್ ನೀಡಿದರೆ, ಗರ್ಭಕೋಶದ ಅಕುಂಚನದಿಂದ ರಕ್ತಸ್ರಾವ ನಿಲ್ಲುತ್ತದೆ. ನನ್ನ ಸಲಹೆಯಂತೆ ನಡೆದುಕೊಂಡ ಶ್ರೀಧರ ಅವರಿಂದ ನನ್ನ ಕೆಲಸ ಸುಲಭವಾಗಿತ್ತು. ಆಸ್ಪತ್ರೆಯೇ ಬೇಕೆಂಬ ಕ್ಲಿಷ್ಟಕರ ಸಂದರ್ಭದಲ್ಲಿ, ಸಂದರ್ಭವೊಂದನ್ನು ನಿರಾಳವಾಗಿ ನಿವಾರಿಸಿದಂತಾಗಿತ್ತು. ಬಾಣಂತಿಯ ಆರೋಗ್ಯ ವೈಪರಿತ್ಯವನ್ನು ಗಮನಿಸಲು ಇನ್ನೂ ಅರ್ಧ ಗಂಟೆ ಅಲ್ಲೇ ಕುಳಿತೆ. ಕಾಫಿಯ ಆತಿಥ್ಯವೂ ಮುಂದುವರೆದಿತ್ತು. ನನ್ನನ್ನು ಕರೆಯಲು ಕಾರಣರಾದ ಶ್ರೀನಿವಾಸ್ ಆಚಾರರಿಗೆ ಹೆಮ್ಮೆ, ನನ್ನ ಕೈಗುಣವನ್ನು ಹೊಗಳುತ್ತಿದ್ದರು. ಶ್ರೀಧರ ಅವರಲ್ಲೂ ಕೃತಜ್ಞತಾ ಭಾವ ತುಂಬಿತ್ತು. ನನ್ನನ್ನು ಬಿಟ್ಟರೆ ಸನ್ನಿವೇಶದ ಕ್ಲಿಷ್ಟತೆಯ ಅರಿವು ಅವರಿಗೆ ತಿಳಿದಿತ್ತು. ಈ ವೈದ್ಯವನ್ನು ಸಮರ್ಪಕವಾಗಿ ಮುಗಿಸಿದ ಹೆಮ್ಮೆ ನನ್ನದಾಗಿತ್ತು. ವ್ಯತ್ಯಾಸವಾದರೆ ರೋಗಿಯ ಜೀವಕ್ಕೆ ಅಪಾಯ, ವೈದ್ಯನ ಬದುಕು ಮುಕ್ತಾಯ. ಹಾಗಾಗಿ ಇದು ನನ್ನ ವೃತ್ತಿ ಜೀವನದ ರೋಚಕ ಅನುಭವವಾಗಿದೆ.

ಜನನ ಮರಣ ಕಾಯಿಲೆ ಕಸಾಲೆಗೆ, ಹಗಲು ರಾತ್ರಿ ಎಂಬ ಬೇದ ಇಲ್ಲ. ಹಾಗೆ ವೈದ್ಯನ ಬದುಕಿನಲ್ಲೂ, ಊಟ, ನಿದ್ದೆ, ಎಚ್ಚರ ಎಂಬ ನಿಯತತೆ ಇಲ್ಲ. ಹಲವು ಬಾರಿ ನಿದ್ದೆಯಲ್ಲಿರುವ ಹೆಂಡತಿ ಜಯಂತಿಗೆ ಹೇಳದೆ, ಹೊರಬಾಗಿಲಿಗೆ ಬೀಗ ಹಾಕಿ ಹೋದದ್ದೂ ಇದೆ. ಎಷ್ಟೋ ಬಾರಿ ಕ್ಲಿನಿಕ್ಕಿನ ಬಾಗಿಲನ್ನು ತೆರೆಯುವುದು ತಡವಾಯಿತು ಎಂಬಂತಾಗುತ್ತದೆ. ರಾತ್ರಿ 9 ಕ್ಕೆ ಕ್ಲಿನಿಕ್ ಮುಚ್ಚಿದರೂ, ಬೇಗ ಮುಚ್ಚಿದಂತಾಯಿತು ಎಂಬ ಸಂದರ್ಭವೂ ಒದಗುತ್ತದೆ. 1974ರ ಒಂದು ರಾತ್ರಿ, ಕ್ಲಿನಿಕ್ ಮುಚ್ಚಿ ಹೊರಡುವ ತಯಾರಿಯಲ್ಲಿದ್ದೆ. ಅಷ್ಟೊತ್ತಿಗೆ ಡೆಲಿವರಿ ಮಾಡಿಸಲು ಕರೆಯುವುದಕ್ಕಾಗಿ ಒಬ್ಬರು ಬಂದಿದ್ದರು. ಈ ಮೊದಲೇ ಅಲ್ಲಿಗೆ ಬಂದ ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರದ ದಾದಿ ಜೊಸೆಫಿನಾ, ನನ್ನನ್ನು ಕರೆದುಕೊಂಡು ಬರಲು ಹೇಳಿದಳಂತೆ. ಅವರು ಹೇಳುವುದನ್ನು ಕೇಳಿದರೆ ಪರಿಸ್ಥಿತಿ ಸ್ವಲ್ಪ ಕ್ಲಿಷ್ಟಕರವಾಗಿಯೆ ಇತ್ತು.

ಕ್ಲಿನಿಕ್‌ನಿಂದ ಒಂದು ಕಿಲೋ ಮೀಟರ್ ದೂರದಲ್ಲಿ ಅವರ ಮನೆ ಇತ್ತು. ನಡೆಯುತ್ತಾ, ನೋವು ಯಾವಾಗ ಪ್ರಾರಂಭವಾಯಿತು? ಇದು ಎಷ್ಟನೇ ಹೆರಿಗೆ ಎಂಬಿತ್ಯಾದಿ ಮಾಹಿತಿಯನ್ನು ಕೇಳಿದೆ. ಮಧ್ಯಾಹ್ನ 3 ಗಂಟೆಗೆ ನೋವು ಪ್ರಾರಂಭವಾಯಿತು, ಇದು ಏಳನೇ ಹೆರಿಗೆ, ಮೊದಲೆಲ್ಲ ಮನೆಯಲ್ಲಿ

ಸರಾಗವಾಗಿ ಹೆರಿಗೆಯಾಗಿದೆ. ಈಗ ಎರಡು ವರ್ಷದ ಹಿಂದೆ, ಗರ್ಭಕೋಶದಲ್ಲಿ ಸ್ವಲ್ಪ ತೊಂದರೆ ಕಾಣಿಸಿಕೊಂಡಿತು. ಅದಕ್ಕೆ ಶಸ್ತ್ರ ಚಿಕಿತ್ಸೆಯೂ ಬೇಕೆಂದು ಡಾಕ್ಟರ್ ಹೇಳಿದ್ದರು. ಆದರೆ ಬಿಡುವಾಗಲೇ ಇಲ್ಲ, ಅಷ್ಟರಲ್ಲಿ ಗರ್ಭಿಣಿಯಾದಳು ಎಂದು ವಿವರಿಸಿದರು. ಹಳ್ಳಿಯಲ್ಲಿ ಜನರ ಮನೋಭಾವವೇ ಹಾಗೆ, ಯಾವುದೇ ರೋಗದ ಪ್ರಾರಂಭದಲ್ಲಿ, ಚಿಕಿತ್ಸೆ, ಔಷಧೋಪಚಾರಗಳ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ. ಆರೋಗ್ಯ ವಿಷಯದಲ್ಲಿ ಉದಾಸೀನವೇನೆಂದು ಅರ್ಥವಾಗದು, ಎಂದೆಲ್ಲ ಯೋಚಿಸುತ್ತಿರುವಾಗಲೇ ಅವರ ಮನೆ ಬಂದಿತು. ದಾದಿ ಜೋಸೆಫಿನಾ, ನನ್ನನ್ನು ನೋಡುತ್ತಲೇ ನಮಸ್ಕರಿಸಿ, ಹೆರಿಗೆ ಕೋಣೆಗೆ ಕರೆದುಕೊಂಡು ಹೋದಳು.

ದಾದಿ ಜೋಸೆಪಿನಾ ತೊಂದರೆಯ ಬಗ್ಗೆ ವಿವರಣೆ ನೀಡತೊಡಗಿದಳು. "ಸಾರ್! ನೋವು ಚೆನ್ನಾಗಿ ಬರುತ್ತದೆ. ಆದರೆ ನೋವು ಬಂದಾಗ ಮುಕ್ಕಾಲು ಭಾಗ ಗರ್ಭಕೋಶವೇ ಹೊರಗೆ ಬರುತ್ತದೆ!? ಈ ಸ್ಥಿತಿಯಲ್ಲಿ ಇವಳು ಗರ್ಭಿಣಿ ಆಗಿರುವುದೆ ಆಶ್ಚರ್ಯ! ಎಂದಳು. ಜೊತೆಗೆ "ಗರ್ಭಕೋಶದ ದ್ವಾರ ಪೂರ್ಣ ತೆರೆದಿದೆ, ಆದರೆ ಮೆಂಬ್ರೈನ್ಸ ಅಂದರೆ ಮಗುವನ್ನು ಆವರಿಸಿರುವ ಎಮ್ನಿಯೋಟಿಕ್ ಸೇಶ್ ಹರಿಯಲಿಲ್ಲ" ಎಂದು ಹೇಳಿದಳು.

ಹೀಗೆ ವಿವರವನ್ನು ತಿಳಿಯುತ್ತಿರುವಾಗಲೇ ಆಕೆಗೆ ಪುನಃ ನೋವು ಕಾಣಿಸಿತು. 'ನೋಡುತ್ತೇನೆ! ಗರ್ಭಕೋಶ ಆಕುಂಚನಗೊಂಡಾಗ ಮುಕ್ಕಾಲು ಭಾಗ ಗರ್ಭಕೋಶವೇ ಹೊರಗೆ ಬಂದಿತ್ತು! ಜೋಸೆಫಿನಾ 'ನೋಡಿ ಸರ್! ಈ ತರಹದ ಹೆರಿಗೆ ನನ್ನ ಅನುಭವದಲ್ಲಿಯೇ ಮೊದಲು! ಹಾಗಾಗಿ ನಿಮ್ಮನ್ನು ಕರೆ ತರಲು ಹೇಳಿದೆ' ಎಂದಳು. ಈ ಪರಿಸ್ಥಿತಿಯನ್ನು ಹೇಗಾದರೂ ನಿಭಾಯಿಸಲೇಬೇಕಾದ ಅನಿವಾರ್ಯತೆ ನಮ್ಮದಾಗಿತ್ತು. ಗರ್ಭಕೋಶವನ್ನು ಕೈಯಿಂದ ದೂಡಿ, ಯಥಾ ಸ್ಥಾನದಲ್ಲಿ ಸೇರಿಸುವ ಕಾರ್ಯದಲ್ಲಿ ನನ್ನ ಸಲಹೆಯಂತೆ ಜೋಸೆಫಿನಾಳು ಕೈಜೋಡಿಸಿದಳು.

ಈ ಗರ್ಭಕೋಶದ ಆಕುಂಚನ ಸಾಮಾನ್ಯವಾಗಿ ಎರಡು ನಿಮಿಷಕ್ಕೊಮ್ಮೆ ಬರುತ್ತದೆ. ಅಷ್ಟರಲ್ಲಿ ಜೋಸೆಫಿನಾಳಿಗೆ, "ಈಗ ನೋವು ಬಂದಾಗ ಗರ್ಭಕೋಶ ಕೆಳಗೆ ಜಾರದಂತೆ ನೀವು ಒತ್ತಿ ಹಿಡಿಯಬೇಕು. ನಾನು ಮೆಂಬ್ರೈನ್ಸನ್ನು ಕತ್ತರಿಯಿಂದ ಬಿಡಿಸುತ್ತೇನೆ" ಎಂದು ಹೇಳಿ, ಎಲ್ಲಾ ಸಿದ್ಧತೆಯನ್ನು ಮಾಡಿಕೊಂಡು ನಿಂತೆವು. ನೋವು ಪ್ರಾರಂಭವಾಯಿತು. ಮೊದಲೇ ನಾನು ಹೇಳಿದಂತೆ ದಾದಿ ಗರ್ಭಕೋಶವನ್ನು ಜಾರದಂತೆ ಹಿಡಿದಳು. ನಾನು ಮೆಂಬ್ರೈನ್ಸ್ ಅನ್ನು ಕತ್ತರಿಯಿಂದ ಬಿಡಿಸಿದೆ. ಕೆಲವೇ ಕ್ಷಣಗಳಲ್ಲಿ ಪ್ರಸವವಾಗಿತ್ತು. ದಾದಿ ಮಗುವಿನ ಬಾಯಿಯನ್ನು ಕ್ಲೀನ್ ಮಾಡಿ, ಹೊಕ್ಕುಳ ಬಳ್ಳಿಯನ್ನು ಕತ್ತರಿಸಿದಳು. ಮಗುವಿನ ಜೋರಾದ ಅಳುವಿನ ದನಿ, ನಮ್ಮ ಸಾಹಸವನ್ನು ಕೂಗಿ ಹೇಳಿದಂತಿತ್ತು.

ಈಗಲೂ ಆ ದೃಶ್ಯವನ್ನು ನೆನೆಸಿಕೊಂಡರೆ ಆಶ್ಚರ್ಯವಾಗುತ್ತದೆ ಈ

ತರದ ಸಂದರ್ಭಗಳನ್ನು ಕಾಲೇಜಿನಲ್ಲಿ ಕಲಿಯಲಾಗದು. ಸ್ವಲ್ಪ ಸಾಮಾನ್ಯ ಜ್ಞಾನ, ವೃತ್ತಿಯಿಂದ ಪಡೆದ ಅನುಭವ, ಹಾಗೂ ಧೈರ್ಯವೆಂಬ ತ್ರಿವೇಣಿ ಸಂಗಮದಿಂದ ಇಂತಹ ಚಿಕಿತ್ಸೆ ಕಾರ್ಯಸಾಧುವಾಗುತ್ತದೆ.

ಚಿಕ್ಕದಾದ ರೂಮು, ಸುಮಾರು 25 ಕ್ಯಾಂಡಲ್ ಬಲ್ಬಿನ ಬೆಳಕಿನಲ್ಲಿ, ಸಮಾಧಾನದಿಂದ ಸಮಯ ಪ್ರಜ್ಞೆಯಿಂದ ನಾನು ಮಾಡಿದ ಕಾರ್ಯಕ್ಕೆ ಜೋಸೆಫೀನಾ ದಂಗಾಗಿದ್ದಳು. ಹೊರಬರುವಷ್ಟರಲ್ಲಿ ಮೈಯೆಲ್ಲಾ ಬೆವತು ಹೋಗಿತ್ತು. ಒಬ್ಬಾತ ಎಳನೀರನ್ನು ನೀಡಿದಾಗ, ಮೈಮನಕ್ಕೆ ಹಿತವಾಗಿ ನಿರಾಳನಾದೆ. ಬಂದ ಕೆಲಸ ಸುಖಾಂತ್ಯವಾಯಿತು. ಸಾರ್ಥಕವೂ ಆಯಿತು ಎಂಬ ಸಮಾಧಾನದೊಂದಿಗೆ ಮನೆಗೆ ಬಂದೆ. ನನ್ನ ವೃತ್ತಿ ಜೀವನದ ಪ್ರಾರಂಭದಲ್ಲಿ ಮಾಡಿದ ಚಿಕಿತ್ಸೆ ಇದಾದರೂ ಅನುಭವವೆಂದು ಎಣಿಸಿದಾಗ ಇದು ಮೊದಲನೆಯ ಸ್ಥಾನದಲ್ಲಿ ನಿಲ್ಲುತ್ತದೆ. ಈಗಲೂ ಆ ಸಂದರ್ಭದ ಕ್ಷಣ ಕ್ಷಣವು, ಇಂಚಿಂಚು ಕಣ್ಮುಂದೆ ಹಾಗೆ ಇದೆ.





**ಮು**ದ್ದಿನ ಮಾವ, ಪ್ರೀತಿಯ ಗೆಳೆಯ, ಸುಬ್ಬಣ್ಣ ಹಂದೆ
ನೀಳ ದೇಹ, ಕತ್ತಿ ಮೀಸೆ, ಹಣೆ ಸ್ವಲ್ಪ ಮುಂದೆ

ಮಾತು ಕಡಿಮೆ, ತೂಕ ಜಾಸ್ತಿ, ನೇರ ನುಡಿ
ಕಾಯಕವೇ ಕೈಲಾಸ, ಜನಾರೋಗ್ಯವೇ ಜೀವನಾಡಿ

ಕಂಚುಕಂಠ, ಮೃದು ಭಾವ, ಮನದಿ ಶಾಂತ ಗುನುಗು
ಸ್ನೇಹಜೀವಿ ಮೊಗದಲಿ ಸದಾ ಮೊನಾಲಿಸಾ ನಗು

ಜ್ಞಾನಭಂಡಾರಿಯಾದರೂ, ಹೊಸಬಗೆ ಕೂಸ ಕುತೂಹಲ
ದೇಶ ಸುತ್ತಿ, ಕೋಶ ಓದಿದರೂ, ಮುಗ್ಧ ಮನೋಹಂಬಲ

ಜೀವ ಗೆಳತಿ ಜಯಂತಿ, ಮುದ್ದಿನ ಜೀವನ್ಮನೋ ಸಾರಥಿ
ಲಾಲಿಸಿ, ಪಾಲಿಸಿ, ಗೆಳೆಯರಾದರು ನಿಮಗೆ, ಓ ಗಣೇಶ, ಆರತಿ

ಕಷ್ಟದಿಂದ ಕಟ್ಟಿ, ನಡೆಸಿದರು ಪ್ರೀತಿ-ಹಸನ ತುಂಬು ಜೀವನ
ಹಂಚಿ ಗಳಿಸಿದರು ಬಹುದೊಡ್ಡ ಬಂಧು ಜನ ಬಳಗ ಪ್ರೇಮ ಭಾವನ

ಅನಿಸುತಿದೆ, ಹೋಗಿಲ್ಲ ನೀವು, 'ಹೇಗಿದ್ದೀ' ಅಂತಾ ಕರೆಯುವಿರಿ ಇಂದೂ
ಪ್ರೇಮ ಚಿಲುಮೆಯ ಕೊಟ್ಟಿರಿ ಸೊಸೆ, ಅಳಿಯನಿಗೆ, ಮಗಳು, ಮಗನ ಪರಿ ಎಂದೂ

ಉಕ್ಕಿ ಬರುತಲಿದೆ ಕಣ್ಣೀರು, ನೆನೆದು, ನನ್ನೆಲ್ಲ, ಸಾಹಸಗಳು ನಿಮ್ಮೊಂದಿಗೆ
ಸೌಭಾಗ್ಯ ನನ್ನದು, ಮನೋ ಇಂಗಿತ ಗೆಳೆಯರಾದಿರಿ, ಸಸ್ನೇಹದೊಂದಿಗೆ

ದೇಹ ಅಗಲಿದರೂ, ಸದಾ ಚಿರಂಜೀವಿ ನೀವು ಸತ್‌ಪ್ರೇಮ ಕಾರಂಜಿ
ನಮ್ಮೆಲ್ಲರ ಮನದಲಿದೆ ಸದಾ ನಿಮ್ಮ ಸದ್ಭಾವನ ಪ್ರೀತಿಗಾನದ ಕೊರವಂಜಿ

**ಸಾರಾಸುಭ (ಸುರೇಶ ಭಟ್ – ಅಳಿಯ)**



# ಡಾ. ಕೋಟ ಸುಬ್ಬಣ್ಣ ಹಂದೆ

"ಪ್ರಥಮೋ ದೈವೋ ಭಿಷಕ್"

ಈ ಜಗತ್ತಿನ ಮೊದಲ ದೇವರೇ ವೈದ್ಯರು. ಆದರೂ ಈ ಲೋಕದಲ್ಲಿ, ದೇವರಂತ ವೈದ್ಯರು ದೇವರಷ್ಟೇ ದುರ್ಲಭ. ಅಂತಹ ವಿರಳ ಪಂಕ್ತಿಯ ಪಾವನ ಹೆಸರು ಡಾ. ಕೆ.ಎಸ್. ಹಂದೆಯವರು. ಕಿರುನಗೆಯಲ್ಲಿ ಬೆಳಗುವ ಪ್ರಸನ್ನಮುಖ, ಚಿತ್ತಶಾಂತಿಯನ್ನು ಅಭಿವ್ಯಕ್ತಿಸುವುದರೊಂದಿಗೆ, ಬಂದವರಿಗೆ ಸಮಾಧಾನದ ತಂಪನ್ನು ನೀಡುವ ಕಣ್ಣುಗಳು, ಉದ್ದೇಶಿತ ವ್ಯಕ್ತಿಗೆ ಮಾತ್ರ ಕೇಳುವ ನಿರುದ್ಯೋಗದ ಮಾತುಗಳು. ಸ್ಪರ್ಶದಿಂದಲೇ ರೋಗ ನಿದಾನಮಾಡುವ ಚಿಕಿತ್ಸಾ ಅನುಭವ. ಈ ಗುಣಕ್ಕೆಲ್ಲ ಕಲಶಪ್ರಾಯವಾದದ್ದು ಅವರ ವೃತ್ತಿಯನ್ನು ಸೇವೆ ಎಂದೇ ನಡೆಸುತ್ತಿದ್ದುದು. ಚಿಕಿತ್ಸೆಯ ಬಿಲ್ಲು ಎರಡಂಕಿ ದಾಟಲೇ ಇಲ್ಲ. ಲಕ್ಷಾಂತರ ಖರ್ಚಿನ ಶಸ್ತ್ರಚಿಕಿತ್ಸೆಯನ್ನು ಇನ್ನೂರೋ ಮುನ್ನೂರೋ ರುಪಾಯಿಗಳಲ್ಲಿ ಮುಗಿಸಿಕೊಂಡ ಬಡವರು ಹಲವರಿದ್ದಾರೆ. ಹಲವಾರು ಸ್ಕ್ಯಾನ್‌ಗಳ ಪರೀಕ್ಷೆಯಿಂದ ತಿಳಿಯಬೇಕಾದ ರೋಗವನ್ನು ಕಣ್ಣಿನಲ್ಲೇ ಸಮರ್ಪಕವಾಗಿ ಗುರುತಿಸುವ ಅಶಕ್ತರ ಅಶ್ವಿನಿದೇವತೆ,

ರೋಗಿಯ ಶಕ್ತಿಯನ್ನರಿತು ಮುಂದಿನ ಚಿಕಿತ್ಸೆಯ ಸ್ಥಳವನ್ನೂ ವೈದ್ಯರನ್ನೂ ಸೂಚಿಸುವ ರೀತಿ ರೋಗಿಗೆ ಮಾಡುವ ಆಶೀರ್ವಾದವೇ ಆಗಿತ್ತು. ಸದಾ ತುಂಬಿ ತುಳುಕುವ ಆಸ್ಪತ್ರೆ. ಟೋಕನ್ ಇಲ್ಲ, ಹೆಸರು ಕೂಗುವವರಿಲ್ಲ, ಬಂದ ರೋಗಿಗಳೇ ಸಂಯಮದಿಂದ ಸರದಿಯಲ್ಲಿ ಸಾಗುವುದು ಆಶ್ಚರ್ಯವೇ ಸರಿ. ಇಂತಹ ಡಾ. ಕೆ.ಎಸ್. ಹಂದೆಯವರ ಮರಣವನ್ನು ಏನೆಂದು ಹೇಳೋಣ? ಲಕ್ಷಾಂತರ ಜನರ ಆರೋಗ್ಯ ಭಾಗ್ಯವೇ ಮರೆಯಾಯಿತೆಂದರೆ ಸರಿಯಾದಿತೇನೊ?

'ವೈದ್ಯನು ರೋಗಿಯಿಂದ ಪ್ರತಿಫಲವನ್ನು ಬಯಸಬಾರದು, ರೋಗಿ ವೈದ್ಯರ ಋಣವನ್ನು ಮರೆಯಬಾರದು' ಎಂಬ ಮಾತಿನ ಮೊದಲಭಾಗಕ್ಕೆ ಅನ್ವರ್ಥವಾದವರು ಡಾಕ್ಟರ್ ಹಂದೆಯವರು. ನೀಡಿದ ಚಿಕಿತ್ಸೆ ಬಗ್ಗೆ ಹಣವನ್ನೇ ಬಯಸದ ಡಾಕ್ಟರ್ ಹಂದೆಯವರಿಗೆ ನಾವಾದರೂ ಏನನ್ನು ಕೊಡುವುದಕ್ಕೆ ಸಾಧ್ಯ?! ಅವರನ್ನು ಸ್ಮರಿಸುವುದೊಂದೇ ನಮಗಿರುವ ಅವಕಾಶ!

ನುಡಿ ನಮನ – **ಶ್ರೀಪಾದ ಗದ್ದೆ**